# ನುಡಿಲಿಂಗದಾರತಿ





ಸಂಕಲನ : ಗುರುಸ್ವಾಮಿ ಕಲಕೇರಿ

ಕಲೆ: ತುಂಬಗಿ

ಶ್ರೀ ವಿಜಯ ಮಹಾಂತೇಶ ಗ್ರಂಥಮಾಲೆ–೨೭

▫

ಚಿತ್ತರಗಿ ಶೂನ್ಯ ಪೀಠಾಧೀಶ

ಪೂಜ್ಯಶ್ರೀ ಮಹಾಂತ ಶಿವಯೋಗಿಗಳು ಇಲಕಲ್ಲ

ಅವರು ಹೊತ್ತಿಸಿದ

▫

# ನುಡಿಲಿಂಗದಾರತಿ

▫

ಲೇಖಕರು

ಗುರುಸ್ವಾಮಿ ಕಲಿಕೇರಿ

೧೯೭೭

# ‘ ನುಡಿಲಿಂಗದಾರತಿ ’

ಪ್ರಕಾಶಕರು :

ಚಿತ್ತರಗಿ ಶ್ರೀ ವಿಜಯಮಹಾಂತೇಶ ಧರ್ಮಪ್ರಸಾರಕ ಮಂಡಲ
ಇಲಕಲ್ಲ ೫೮೭೧೨೫. ಫೋನ : ೪೪



ಲೇಖಕರು :

ಶ್ರೀ ಗುರುಸ್ವಾಮಿ ಕಲಿಕೇರಿ
ಕಾರ್ಯನಿರ್ವಾಹಕ ಸಂಪಾದಕರು,
ಪಂಚಾಕ್ಷರ ಪ್ರಕಾಶ ಕಾರ್ಯಾಲಯ, ಗದಗ.

ಪ್ರಥಮ ಮುದ್ರಣ : ಪ್ರತಿಗಳು ೨೦೦೦ (೧೯೭೭)



ಬೆಲೆ : ಐದು ರೂಪಾಯಿ

ರಕ್ಷಾ ಕವಚ ಕಲೆ : ಶ್ರೀ ಬಸವರಾಜ ಎಚ್. ತಂಬಗಿ A.M.

ಮುದ್ರಕರು :

ಶ್ರೀ ಕೆ. ಜನಾರ್ಧನ
ಸಂಯುಕ್ತ ಕರ್ನಾಟಕ ಪ್ರೆಸ್ (ಜಾಬ), ಕೊಪ್ಪೀಕರ ರೋಡ, ಹುಬ್ಬಳ್ಳಿ.

# ನುಡಿಲಿಂಗದಾರತಿಗೆ ಮುನ್ನನುಡಿ

" ಮರ್ತ್ಯ ಲೋಕದವರ
ಮನದ ಮೈಲಿಗೆಯ ಕಳೆಯಲೆಂದು
ಗೀತ ಮಾತೆಂಬ ಜ್ಯೋತಿಯ ಬೆಳಗಿ ಕೊಟ್ಟರು
ಕೂಡಲ ಚೆನ್ನ ಸಂಗನ ಶರಣರು "

ಶರಣಪಂಕ್ತಿಯಲ್ಲಿ ಪರಿಶೋಭಿಸುವ ಚಿತ್ತರಗಿ ಚರವರ್ಯ ಇಲಕಲ್ಲ ಗುರುವರ್ಯ ಪೂಜ್ಯ ಶ್ರೀ ಮಹಾಂತಪ್ಪಗಳು ನಮ್ಮೆಲ್ಲ ಮರ್ತ್ಯ ಮನುಜರ ಮನದ ಮೈಲಿಗೆಯುಕ್ತ ಕತ್ತಲೆಯ ಕಳೆಯಲೆಂದು ಮಾತೆಂಬ ಜ್ಯೋತಿಗಳನೇಕ ಹೊತ್ತಿಸಿದ್ದಾರೆ; ಹೊತ್ತಿಸಿ ಬೆಳಗುವಂತಿರಿಸಿದ್ದಾರೆ.

ಮಹಾಂತರ ಇರುಮೆ ನಿರಂಜನತ್ವದ ನಿಲುಮೆಯಲ್ಲಿ ನಿಂತಾಡಿದಾಗ ಆ ಮಾತು ಬರೀ ಮಾತೆಂತು? " ಮಾತೆಂಬುದು ಜ್ಯೋತಿರ್ಲಿಂಗ. ಸ್ವರವೆಂಬುದು ಪರತತ್ವ. ತಾಳೋಷ್ಠ ಸಂಪುಟವೆಂಬುದೇ ನಾದ–ಬಿಂದು–ಕಳಾತೀತ ಗೊಹೇಶ್ವರನ ಶರಣರು ನುಡಿದು ಸೂತಕಿಗಳಲ್ಲ ಕೇಳಾ ಮರುಳೆ ! " ಇದನು ತಿಳಿ ಆಳಿಮನದ ಕಾಗುಣಿತವ ನಳಿ ! ಶಿವಶರಣ–ಶಿವಯೋಗಿಗಳು ಪ್ರಾಣವಾಗಿಪ್ಪ ಲಿಂಗವೇ ಹೌದೆನ್ನುವಂತೆ ನೀನುಲಿ ! ಅಂದರೆ ನಿನಗರಿವು ಮಹಾಂತರುಪದೇಶದಲ್ಲಿ ಏನಿದೆ ಎಂಬುದು—

" ಕೆರೆಹಳ್ಳ ಬಾವಿಗಳು ಮೈದೆಗೆದರೆ
ಗುಳ್ಳೆ ಗೊರಚೆ ಚಿಪ್ಪುಗಳು ಕಾಣಬಹುದು
ವಾರಿಧಿಯು ಮೈದೆಗೆದರೆ
ಮುತ್ತು ರತ್ನಗಳ ಕಾಣಬಹುದು
ಕೂಡಲ ಸಂಗನ ಶರಣರು ಮನದೆರೆದು
ಮಾತನಾಡಿದರೆ–ಲಿಂಗವೇ ಕಾಣಬಹುದು "

ಇಂತಪ್ಪನಂತ ನುಡಿಲಿಂಗಗಳ ಕಾಣಬಹುದು ಮಹಾಂತರು ದೇಶದ ಚಾತಕವಾಗಿ ನೀ ನಿಂತಾಗ. ಹಾಗಾಗಿ ನಾನು ಅನಂತ ನುಡಿ ಲಿಂಗ ಗಳ ಕಂಡೆ; ಕಾಣುವೆ. ಮಹಾಂತರಪ್ಪಣೆಯಲ್ಲಿ. ಆ (ಪರದ) ರತಿ ಬಯ ಸುವ; ಇಹ ಜಯಿಸುವ ಕಳಾಮಯ ಬೆಳಗನ್ನೆ ಬೆಳಗುವ ಮಹಾಂತರ ಮಾತುಗಳು ಜ್ಯೋತಿರ್ಲಿಂಗಗಳು. ನುಡಿಗಳೆಲ್ಲ ಲಿಂಗದಾರತಿಗಳು. ಅವು ಗಳಲ್ಲಿ ಕೆಲವೊಂದು ಸರಗೊಂಡು "ನುಡಿಲಿಂಗದಾರತಿ" ಎಂಬ ಶಿರೋನಾಮ ದಡಿಯಲ್ಲಿ ೧೯೭೦ನೆಯ ಜುಲೈ ಸಂಚಿಕೆ ಪರಂಜ್ಯೋತಿ ಮಾಸಿಕದಲ್ಲಿ ಪ್ರಕಾಶನಗೊಂಡಿತು.

ಮಹಾಂತ ಪ್ರಭೆಯುಕ್ತ ನುಡಿಲಿಂಗದಾರತಿಗಳನ್ನು ಪರಂಜ್ಯೋತಿ ಪತ್ರಿಕೆ ನಾಡ ತುಂಬೆಲ್ಲ ಬೆಳಗಿಸಿದಾಗ–ಅದರ ಸಂಪಾದಕರು; ಕವಿಗಳು. ವಾಗ್ಮಿಗಳು; ಮಹಾ ತಪಸ್ವಿ ಚಲನಚಿತ್ರವಾದ ಚಿತ್ತರಗಿ ಚಿಜ್ಯೋತಿ ಗ್ರಂಥಕರ್ತರು; ಹೆಚ್ಚಾಗಿ ನಮ್ಮ ಆತ್ಮೀಯರೂ ಆದ ಪ್ರೊ. ಜಿ. ಎಚ್. ಹನ್ನೆರಡುಮಠ ಎಂ. ಎ. ಅವರು ಈ ರೀತಿ ನನಗೆ ಹೇಳಿದರು: "ಗುರು ಸ್ವಾಮಿಯವರೆ! ಪೂಜ್ಯ ಮಹಾಂತ ಶಿವಯೋಗಿಗಳು ಹೊತ್ತಿಸಿದ ಕೆಲವೇ ನುಡಿಲಿಂಗದಾರತಿಗಳನ್ನು ನಮ್ಮ ಪತ್ರಿಕಾ ಮುಖಾಂತರ ಬೆಳಗಿದ್ದೀರಿ.ಅದರ ಪರಿಣಾಮವಾಗಿ ಹಲವಾರು ಜೀವರುಗಳ ಹೃದಯಿಗಳು ಬೆಳಕುಂಡು ಶ್ಲಾಘಿಸಿವೆ. ಇದೇ ರೀತಿ ನಾಡೆಲ್ಲ ಜೀವರ ಮನ ಬೆಳಗಬೇಕು. ಕಾರಣ–ನೀವು ಇನ್ನಷ್ಟು ಕಷ್ಟಪಟ್ಟು ಅಧಿಕ ಸಂಖ್ಯೆಯಲ್ಲಿ ಮಹಾಂತರ ನುಡಿ ಲಿಂಗದಾರತಿಗಳನ್ನು ಸರಳಗೊಳಿಸಿ, ಪುಸ್ತಿಕಾ ಪ್ರಣತಿಯಲ್ಲಿ ವಿಸ್ತಾರವಾಗಿ ಬೆಳಗಿಸಲಣಿಯಾಗಬೇಕು! ಮಹಾಂತರ ಬೆಳ್ದೀವನವನ್ನು ಬಹು ದಿನಗಳಿಂದ ಕಾಣುತ್ತ ಬಂದವರಾಗಿದ್ದೀರಿ ನೀವು. ಅಂತೇ ನಿಮಗದು ಸಾಧ್ಯ. ಆದಷ್ಟು ಬೇಗ ಜಗದೆಲ್ಲ ಜನಮನಕ್ಕೆ ದರ್ಶನ ಮಾಡಿಸಿರಿ ಮಹಾಂತರ ನುಡಿ ಲಿಂಗದಾರತಿಗಳನ್ನು" ಎಂಬುದಾಗಿ ವಾತ್ಸಲ್ಯ ದೊತ್ತಾಯದ ಸಲಹೆ ಇತ್ತಾಗ–ಇನ್ನೊಬ್ಬ ಮಹಾಂತೇಶ ಪೀಠದ ಪರಮ ಭಕ್ತರು; ಮಹಾ ತಪಸ್ವಿ ಚಲನಚಿತ್ರದ ನಿರ್ಮಾಪಕರಲ್ಲಿ ಒಬ್ಬರು; ಆತ್ಮೀ ಯರೂ ಆದಂಥ ಶ್ರೀಯುತ ಶಿವಲಿಂಗಣ್ಣ ತಾಳಿಕೋಟಿ ಇವರು "ಹೌದು ಸ್ವಾಮಿಗಳೆ! ಅರ್ಜಂಟಾಗಿ ನೀವೀ ಕಾರ್ಯ ಮಾಡಲೇಬೇಕು. ಅದಕ್ಕೆ

ಬೇಕಾದಷ್ಟು ಹಣ ವ್ಯಯವಾಗಲಿ ನಾನು ನಿರ್ವಹಿಸುತ್ತೇನೆ" ಎಂದು ಹೃದ್ದುಂಬಿ ಒತ್ತಾಯಿಸಿದರು. ಈ ನನ್ನ ಆತ್ಮೀಯರೀರ್ವರ ಮಾತಿಗೆ ನಾನೆಂತು ಹೊರತು? ಇವರಿಚ್ಛೆಗೆ ಮಣಿದು ಈ ಸೇವೆಗಣಿಯಾದೆ.

ಬಹು ಜನಮನದ ಸುಕೃತ ಫಲವಾಗಿ ಬಹು ದಿನಗಳಿಂದಲೂ ಮಹಾಂತಪ್ಪಗಳ ಜತೆಗೆ ಇರುವ, ಇದ್ದು ಸೇವೆಗೈಯ್ಯುವ ಪುಣ್ಯಾವಕಾಶ ನನಗೆ ಒದಗಿದೆ; ಒದಗುತ್ತಲೆ ಬಂದಿದೆ, ಬರುತ್ತಲೇ ಇದೆ. ಹೀಗಾಗಿ ಪೂಜ್ಯರು ಹಲವು ಸಂದರ್ಭಗಳಲ್ಲಿ ಅಪ್ಪಣೆ ಕೊಡಿಸಿದ ಪ್ರಸಂಗಗಳು ಹಾಗು ನುಡಿಮುತ್ತುಗಳು ನನ್ನ ಸ್ಮೃತಿಖಜಾನೆಯಲ್ಲಿ ಅನಂತ ತುಂಬಿವೆ. ಅವೆಲ್ಲವು ಗಳನ್ನು ಆ ಆ ಪ್ರಸಂಗಗಳೊಂದಿಗೆ ಸಾರಸತ್ವಕ್ಕೆಡೆ ಮಾಡಬೇಕೆನ್ನುವ ಸಂಕಲ್ಪ ನನ್ನದು. ಅದಕ್ಕೆ ಸಮಯ ಸಾಕಷ್ಟು ಬೇಕು. ಇರಲಿ—ಈಗ ಸಮಯ ಸ್ವಲ್ಪ, ಕೇವಲ ೧–೨ ಪ್ರಸಂಗಗಳನ್ನು ಮಾತ್ರ "ಮಹಾಂತ ಪೀಠಿಕಾ"ದಲ್ಲಿ ವಿವರಿಸಿರುವೆನಷ್ಟೆ. ಬೇಕಾದಷ್ಟು ಖರ್ಚಾಗಲೆಂದು ಶಿವಲಿಂಗಣ್ಣ ನಿಂತಿದ್ದಾರೆ. ಬೇಕಾದಷ್ಟು ಗ್ರಂಥ ವಿಸ್ತಾರವಾಗಲಿಪ್ರಕಾಶನ ಪಡಿಸುತ್ತೇವೆಂದು "ವಿಜಯ ಮಹಾಂತೇಶ ಧರ್ಮ ಪ್ರಚಾರಕ ಮಂಡಲ" ದವರು ಸಿದ್ಧರಾಗಿದ್ದಾರೆ. ಆದರೆ ನನಗೆ ಸಮಯ ಸಾಲದಾಯಿತು. ಆ ಕಾರಣವಾಗಿ ಇಷ್ಟನ್ನು ಮಾತ್ರ ಓದುಗರಿಗೆ ಎಡೆಮಾಡಿರುವೆ. ನುಡಿ ಲಿಂಗದಾರತಿಯ ಬೆಳ್ಗಿರಣಸುಪ್ರಸಾದವನ್ನೀಗ ಸದಾ ನನ್ನನ್ನು; ನನ್ನ ಕೃತಿ ಗಳನ್ನು ಆದರಿಸುತ್ತಲೇ ಬಂದ ನೀವೆಲ್ಲ ಓದುಗರು—ನನ್ನ ಈ ಕಿರಿ ಸೇವೆ ಯಲ್ಲಿ ಹಿರಿ ತೃಪ್ತಿ ತಂದುಕೊಂಡೆನ್ನ ಹರಸಿದರೆ...ನನ್ನ ಶ್ರಮಕ್ಕೆ ಗಗನ ದುದ್ದ ತುರಾಯಿ. ಈ ಕೃತಿ ಸರ್ವಾಂಗ ಸುಂದರವಾಗಿ ಮೈದಾಳಲು ವಿಶೇಷ ಶ್ರಮ ವಹಿಸಿದ ಜನಪ್ರಿಯ ಸಾಹಿತಿ ಪ್ರೊ. ಜಿ. ಎಚ್. ಹನ್ನೆರಡು ಮಠ ಎಂ. ಎ. ಅವರ ಹಾಗು ಸದ್ಭಕ್ತ ಸಂಪನ್ನ ಶ್ರೀ ಶಿವಲಿಂಗಣ್ಣ ತಾಳಿ ಕೋಟಿ ಅವರ ಆತ್ಮೀಯ ಹೃದಯದ ನೆನಕೆ ಸದಾ ನನ್ನ ಮನಕೆ ಇರಲಿ; ಎಂದು ಮಹಾಂತರ ಶ್ರೀಪಾದಕ್ಕೆ ಮಣಿಯುವೆ.

ಗದಗ — ಕವಿ, ಕಲಾವಿದರ ಕಂದ

೨೬–೭–೧೯೭೭ — **ಗುರುಸ್ವಾಮಿ ಕಲಿಕೇರಿ**

# ಮಹಾತಪಸ್ವಿ



ಲಿಂ. ವಿಜಯ ಮಹಾಂತ ಶಿವಯೋಗಿಗಳ ಪವಿತ್ರ
ಶ್ರೀಪಾದ ಪದ್ಮಕ್ಕೆ ಈ ಕೃತಿ ಅರ್ಪಿತವಾಗಿದೆ
ಶ್ರೀ ಚಿತ್ತರಗಿ ಸಂಸ್ಥಾನಮಠ, ಇಲಕಲ್ಲ.

# ನುಡಿಲಿಂಗದ ಮಹಾಬೆಳಗು



ಪೂಜ್ಯ ಶ್ರೀ ನಿ. ಪ್ರ. ಮಹಾಂತಶಿವಯೋಗಿಗಳು ಶ್ರೀ ಚಿತ್ತರಗಿ ಸಂಸ್ಥಾನಮಠ,
ಇಲಕಲ್ಲ.

# ಆಶೀರ್ವಚನ



ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು
ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮಠ, ಹುಬ್ಬಳ್ಳಿ.

## ಪುಣ್ಯ ಸ್ಮರಣೆಯಲ್ಲಿ



ಎಲೆಯ ಮರೆಯ ಹೂವಿನಂತೆ ಬಾಳಿಬೆಳಗಿದ ತಾಯಿ
ಸೌ. ಲಿಂ. ಶಾಂತಮ್ಮ ಕೋಂ. ವೀರನಗೌಡ ಪಾಟೀಲ
ಗೊರಬಾಳ.

## ಶ್ರೀಷಣ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರಮಠ ಅವರಿಂದ

# ಆಶೀರ್ವಚನ

ಸಂಗೀತ ಕಲಾವಿದರೂ ಸಾಹಿತಿಗಳೂ ಆದ ಶ್ರೀ ಗುರುಸ್ವಾಮಿ ಕಲಿಕೇರಿಯವರು ಸಂಕಲನ ಮಾಡಿದ "ನುಡಿಲಿಂಗದಾರತಿ" ನೋಡಿದೆವು. ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನಮಠದ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು ಅಲ್ಲಲ್ಲಿನೀಡಿದ ಭಾಷಣಗಳು ಹಾಗೂ ಲೇಖನಗಳ ಸಾರಸರ್ವಸ್ವವನ್ನು ಅವರು "ನುಡಿಲಿಂಗದಾರತಿ" ಎಂಬ ಮೊದಲನೆಯ ಲೇಖನದಲ್ಲಿ ಸ್ವಾರಸ್ಯಮಯವಾಗಿ ಸಂಗ್ರಹಿಸಿದ್ದಾರೆ. ಶ್ರೀ ಸ್ವಾಮಿಗಳವರ ವೈವಿಧ್ಯಪೂರ್ಣ ಹಾಗೂ ವಿಚಾರಪೂರ್ಣ ಅಭಿಪ್ರಾಯಗಳು ಸಾರ್ವತ್ರಿಕ ಸಂದೇಶ (Universal Sayings) ಗಳಾಗಿವೆ. ಲಿಂಗತತ್ವ, ಆಚಾರ, ಕಾಯಕ, ಪಾವಿತ್ರ್ಯ, ಧರ್ಮಪ್ರಜ್ಞೆ, ವಿಶ್ವಶಾಂತಿಗಳ ಬಗ್ಗೆ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳವರು ಆಗಾಗ ಪರಿಣತ ಅಭಿಪ್ರಾಯಂ ಗಳನ್ನು ನೀಡಿದ್ದಾರೆ. ಇಂಥ ಉದಾತ್ತ ಅಭಿವ್ಯಕ್ತಿಗಳಿಗೆ "ನುಡಿಲಿಂಗ ದಾರತಿ" ಎಂದು ಕರೆದುದು ನಿಜಕ್ಕೂ ಅರ್ಥಪೂರ್ಣ. "ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು" ಎಂಬಂತಿರುವ ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳವರ ಈ "ನುಡಿಲಿಂಗದಾರತಿ"ಯನ್ನು ಕಲಾವಿದ, ಸಾಹಿತಿಗಳಾದ ಶ್ರೀ ಗುರುಸ್ವಾಮಿ ಕಲಿಕೇರಿಯವರು ತುಂಬ ಜೋಕೆ-ತೂಕಗಳಿಂದ ಸಂಕಲನಗೊಳಿಸಿದ್ದಾರೆ. ಈ ಗ್ರಂಥ ಸಾವಿರಾರು ಭಕ್ತರ ತತ್ತ್ವಪ್ರೇಮಿಗಳ ಬಯಕೆಯನ್ನು ಈಡೇರಿಸುವಲ್ಲಿ ಸಂಶಯವಿಲ್ಲ.

ಈ ಗ್ರಂಥದ ಉತ್ತರ ಭಾಗದಲ್ಲಿ ಶ್ರೀ ಗುರುಸ್ವಾಮಿಯವರು ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳವರ ಕೆಲವು ರೇಡಿಯೊ ಭಾಷಣ ಗಳನ್ನೂ ಹಾಗೂ ಧರ್ಮ ಸಮ್ಮೇಲನಗಳಲ್ಲಿ ಅಪ್ಪಣೆ ಕೊಡಿಸಿದ ಭಾಷಣ ಗಳನ್ನೂ ಸಂಗ್ರಹಿಸಿದ್ದಾರೆ. ಇದು ಬೆಲೆಬಾಳುವ ಸಂಗ್ರಹವೇ ಸರಿ.

ಈ ಲೇಖನಗಳಲ್ಲಿ ಲಿಂಗ–ಜಂಗಮ–ಆಚಾರ–ವಿಚಾರ–ನೀತಿಗಳ ಬಗ್ಗೆ ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳಿಗಿರುವ ಆತ್ಯಂತಿಕ ಕಳಕಳಿ ಸ್ಫುಟವಾಗಿಯೂ ಪ್ರಬಲವಾಗಿಯೂ ಎದ್ದು ಕಾಣುತ್ತದೆ.

"ನುಡಿಲಿಂಗದಾರತಿ" ಕನ್ನಡ ಜನಕೋಟಿಯ ವೈಚಾರಿಕ ಶ್ರೀಮಂತಿಕೆಯನ್ನು ಅರಳಿಸಲೆಂದು ಹಾರೈಸುತ್ತೇವೆ.

ಈ ಗ್ರಂಥವನ್ನು "ಮಹಾತಪಸ್ವಿ" ಚಲನಚಿತ್ರದ ನಿರ್ಮಾಪಕರಾದ ಶ್ರೀ ಶಿವಲಿಂಗಪ್ಪ ತಾಳೀಕೋಟಿ ಅವರು ತಮ್ಮ ಲಿಂಗೈಕ್ಯ ಅತ್ತೆಯವರಾದ ಸೌ. ಶಾಂತಮ್ಮನವರ ಸಂಸ್ಮರಣೆಯಲ್ಲಿ ಪ್ರಸಿದ್ಧಿಸಿರುವ ಸಂಗತಿ ತಿಳಿದು ನಮಗೆ ಸಂತೋಷವನಿಸಿತು. ಹುನಗುಂದ ತಾಲೂಕಿನ ಸುಪ್ರಸಿದ್ಧ ಮುಖಂಡರೂ ಸಾಮಾಜಿಕ ಧುರೀಣರೂ ಆದ ಸೌ॥ಶಾಂತಮ್ಮನವರು ಶ್ರೀ ವೀರನಗೌಡರ ಜೀವನದಲ್ಲಿ ಎಲೆಯ ಮರೆಯ ಹೂವಿನಂತೆ ಬಾಳಿ ಬೆಳಗಿದವರು. ಅವರ ಅಗಲಿಕೆ ಶ್ರೀ ವೀರನ ಗೌಡರಿಗೆ ಮಾನಸಿಕ ಸಂತಾಪವನ್ನು ತಂದಿದ್ದರೆ ಆಶ್ಚರ್ಯವೇನೂ ಇಲ್ಲ. ಗೌಡರು ಸೌ॥ಶಾಂತಮ್ಮನವರ ನೆನಹನ್ನು "ಶಾಂತಿ ನಿವಾಸ"ದ ಮೂಲಕ ಚಿರಂತನಗೊಳಿಸಿದ್ದಾರೆ. "ಶಾಂತಿನಿವಾಸ"ವು ಶರಣ ಸಾಹಿತಿಗಳೂ "ಪರಂಜ್ಯೋತಿ" ಸಂಪಾದಕರೂ ಆದ ಪ್ರೊ. ಜಿ. ಎಚ್. ಹನ್ನೆರಡುಮಠ ಅವರಿಗೆ ಆಶ್ರಯ ನೀಡಿದ್ದು ನಮಗೆ ಅಪಾರ ಅಭಿಮಾನವನ್ನು ಉಂಟು ಮಾಡಿದೆ. ಅಲ್ಲದೆ "ಮಹಾತಪಸ್ವಿ" ಚಲನಚಿತ್ರದ ನಿರ್ಮಾಪಕರಾದ ಶ್ರೀ ಶಿವಲಿಂಗಪ್ಪನವರು ಈ ಗ್ರಂಥದಿಂದ ಆ ಶರಣಸತಿಯ ನೆನಹನ್ನು ಭಕ್ತ ಪ್ರಪಂಚದಲ್ಲಿ ಶಾಶ್ವತಗೊಳಿಸಿದ್ದಾರೆ. ಇವರ ಪರಿಶುದ್ಧವಾದ ಕೀರ್ತಿ ನಿರುತರ ರಾರಾಜಿಸಲೆಂದು ನಾವು ಹೃತ್ಪೂರ್ವಕವಾಗಿ ಆಶೀರ್ವದಿಸುತ್ತೇವೆ.

## ಮಹಾತಾಯಿ ಸೌಭಾಗ್ಯವತಿ ಶಾಂತಮ್ಮನವರು

ಕೆಲವರಿಗೆ ಶ್ರೀಮಂತಿಕೆಯು ಅಹಂಕಾರ – ದರ್ಪಗಳಿಗೆ ದಾರಿ ಮಾಡಿಕೊಡುತ್ತದೆ; ಇನ್ನು ಕೆಲವರಿಗೆ ಅದೇ ಐಶ್ವರ್ಯ ಸಂಸ್ಕೃತಿ ದಾನ–ಧರ್ಮಗಳ ಪ್ರಸನ್ನ ಪ್ರಕಾಶಕ್ಕೆ ಉಜ್ವಲ ಅವಕಾಶ ನೀಡುತ್ತದೆ. ಹೀಗೆ ಸಿರಿತನದೊಂದಿಗೆ ಶೀಲ–ಸಂಸ್ಕೃತಿ–ಪತಿಸೇವೆ–ಪರೋಪಕಾರ–ಶಿವಪೂಜೆಗಳಿಂದ ಭಾರತೀಯ ಸಂಸ್ಕೃತಿಯ ಗುಪ್ತ ಮುತ್ತೈದೆಯಾಗಿ ಎಲೆಯ ಮರೆಯ ಹೂವಿನಂತೆ ಪತಿಯ ಅಂಗಳವನ್ನು ಬೆಳಗಿದ ಪತಿ–ಪರಾಯಣೆ ಮಹಾತಾಯಿ ಲಿಂಗೈಕ್ಯ ಶಾಂತಮ್ಮನವರು! ಇವರು ಅಕಾಲಿಕ ವಾಗಿ ಅಪ್ಪಿದ ಮುತ್ತೈದೆ ಮರಣದಿಂದ ಇವರ ಯಜಮಾನರಾದ ಶ್ರೀ ಪಾಟೀಲ ವೀರನ ಗೌಡರು ಅಪಾರ ದುಃಖವನ್ನು ಸಹಿಸಬೇಕಾಗಿ ಬಂದಿತು. ಶ್ರೀ ವೀರನ ಗೌಡರ ರಾಜಕೀಯ ವಾಣಿಜ್ಯ–ಸಾಮಾಜಿಕ ಕಾರ್ಯ ಬಾಹುಲ್ಯಗಳ ಎಡೆಬಿಡದ ಕಾರ್ಯಕ್ಷೇತ್ರದಲ್ಲಿ ಈ ತಾಯಿ ಅವರಿಗೆ ಪರಿಪೂರ್ಣ ಅರ್ಥದಲ್ಲಿ ಧರ್ಮಪತ್ನಿಯಾಗಿ ಬಾಳನ್ನು ಗಂಧದಂತೆ ತೇಯ್ದಳು. ಅವರ ಮಾನಸಿಕ ಭಾರಗಳಲ್ಲಿ ಸಮಪಾಲು ಹಂಚಿಕೊಂಡು ಕಷ್ಟಗಳನ್ನು ಹಗುರ ಮಾಡಿದಳು. "ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂಬ ಶರಣ ವಾಣಿಯಂತೆ ಶ್ರೀ ವೀರನ ಗೌಡರ ಮನೆತನವನ್ನು ಬೆಳಗಿದಳು. ಬೆಳೆಸಿದಳು.

## ಕರುಳ ಬಳ್ಳಿ

ಸೌ. ಶಾಂತಮ್ಮನವರ ಸುತ್ತ ಅವರ ಸಂಸಾರದ ಕರುಳ ಬಳ್ಳಿ ಹಬ್ಬಿ ಹೂ ಬಿಟ್ಟಿತು. ಪೂಜ್ಯ ಶ್ರೀ ವೀರನ ಗೌಡರಿಗೆ ಐವರು ಹೆಣ್ಣುಮಕ್ಕಳು, ಇಬ್ಬರು ಗಂಡು ಮಕ್ಕಳು. ಹೆಣ್ಣುಮಕ್ಕಳ ಬಗ್ಗೆ ಈ ಶರಣ ದಂಪತಿ ಗಳು ತೋರಿದ ಪ್ರೀತಿ ವಾತ್ಸಲ್ಯ ಲಾಲನೆ–ಪಾಲನೆಗಳು ಈ ಭಾಗದ ಸರ್ವರಿಗೂ ವಿದಿತವಾದ ಸಂಗತಿ. ಹೀಗಾಗಿ ಅವರೆಲ್ಲ ತಾಯಿ ತಂದೆ ಗಳನ್ನು ನೆನೆಸಿ ತಮ್ಮ ಜೀವನವನ್ನು ಸುರಕ್ಷಿತವಾಗಿಯೂ ಸಮೃದಿ ಯಿಂದಲೂ ಸಾಗಿಸುವಂತಾಗಿದೆ. ಗುಡೂರಿನ ಶ್ರೀ ಸಂಗಪ್ಪ ಬರಿಗಾಲ ಅವರ ಚಿರಂಜೀವಳಾದ ಶಾಂತಮ್ಮ ಮೂರು ದಶಕ ಕಾಲ ಗಂಡನೊಂದಿಗೆ

ಏಕೋ ಭಾವನೆಯಿಂದ ಕಳೆದಳು. ಸತತ ರಾಜಕೀಯ ಚಟುವಟಿಕೆ, ಸಾಮಾಜಿಕ ಕಾರ್ಯಬಾಹುಲ್ಯ, ಭರ್ಜರಿ ವ್ಯಾಪಾರ ಹಾಗೂ ಒಕ್ಕಲುತನ ಗಳಿಂದ ವೀರನ ಗೌಡರ ಗಡಿಬಿಡಿಡಿಯಿಂದ ತುಂಬಿದ ಬಾಳಿಗೆ ಈ ತಾಯಿ ತುಂಬಿದ ಗರತಿಯಾಗಿ ಶಾಂತಿ ಸೌಂದರ್ಯಗಳನ್ನು ತುಂಬಿದಳು. ಗೊರಬಾಳ ಗ್ರಾಮದ ಎಲ್ಲ ಹೆಣ್ಣುಮಕ್ಕಳ ಆದರ ಪ್ರೀತಿ ಗೌರವಗಳನ್ನು ಸಂಪಾದಿಸಿದಳು. ಈ ತಾಯಿ ಜೀವನದಲ್ಲಿ ಏನನ್ನೂ ಹೆಚ್ಚಿಗೆ ಆಶೆ ಮಾಡಲಿಲ್ಲ. ಆದರೆ ಎಲ್ಲವೂ ತಾನೇ ಒದಗಿ ಬಂದಿತು. ಉಡಿ ತುಂಬಿತು. ಇದಕ್ಕಿಂತ ಇನ್ನೇನು ಬೇಕು ಸೌಭಾಗ್ಯ?

**ಶಾಂತಿ ನಿವಾಸದ ತಾಯಿ**

ಪೂಜ್ಯ ವೀರನ ಗೌಡರಿಗೆ ತಮ್ಮ ಈ ಜೀವನಸಂಗಾತಿ ಅಕಾಲಿಕವಾಗಿ ಅಗಲಿ ಹೋದಾಗ ಮಾನಸಿಕವಾಗಿ ಅಪಾರ ನೋವಾಯಿತು. ತಮ್ಮ ಒಂಟಿ ಬಾಳನ್ನು ಮಕ್ಕಳು ಮೊಮ್ಮಕ್ಕಳನ್ನು ಪಾಲನೆ ಮಾಡುವಲ್ಲಿ ಮರೆಯ ಲೆತ್ನಿಸಿದರು. ನಮ್ಮ ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಮಠದ ಧಾರ್ಮಿಕ ಚಟುವಟಿಕೆಗಳಲ್ಲಿ ಆಗಾಗ ಪಾಲ್ಗೊಂಡರು. ಕರ್ತೃ ಗದ್ದುಗೆ ಇವರ ಹೃದಯಕ್ಕೆ ಎಂದಿನಂತೆ ನೆಮ್ಮದಿ ನೀಡಿತು. ವೀರನ ಗೌಡರು ಕೊನೆಗೊಮ್ಮೆ ತಮ್ಮ ಧರ್ಮಪತ್ನಿ ಸೌ॥ ಶಾಂತಮ್ಮನವರ ಹೆಸರನ್ನು ಚಿರಸ್ಥಾಯಿಗೊಳಿಸಿಬಿಟ್ಟರು. ತಾವು ೧೯೭೦ ರಲ್ಲಿ ಕಟ್ಟಿಸಿದ ದೊಡ್ಡ ದಾದ ಕಟ್ಟಡಕ್ಕೆ "ಶಾಂತಿನಿವಾಸ" ಎಂದು ನಾಮಕರಣ ಮಾಡಿದರು. ತಾಯಿ ಶಾಂತಮ್ಮನವರು ತಾವು ಬಾಳಿದಾಗಲೂ ಅನೇಕರಿಗೆ ಆಶ್ರಯ ನೀಡಿದಂತೆ ಐಕ್ಯವಾದ ಮೇಲೂ ತಮ್ಮ "ಶಾಂತಿನಿವಾಸ"ದಲ್ಲಿ ಅನೇಕ ಸಾಹಿತಿಗಳಿಗೆ ಪ್ರಾಧ್ಯಾಪಕರಿಗೆ ಉದಾರ ಆಶ್ರಯ ನೀಡಿ ಕಾಪಾಡುತ್ತಿ ತ್ತಿದ್ದಾಳೆ. ಅವರೆಲ್ಲರ ಬಾಳಿಗೆ ತನ್ನ ನೆರಳು ನೀಡಿ ಕರುಣಿಸಿದ್ದಾಳೆ. ತಾಯಿ ಎಂದಾದರೂ ತಾಯಿಯೇ ಅಲ್ಲವೇ?

ಈ ತಾಯಿಯ ನೆನಹನ್ನು ನಮ್ಮ ಶ್ರೀ ಚಿತ್ತರಗಿ ಧರ್ಮಪ್ರಸಾರ ಮಂಡಲದ ಪ್ರಕಾಶನ ಸಂಸ್ಥೆಯಲ್ಲಿ ಶಾಶ್ವತಗೊಳಿಸಬೇಕೆಂಬ ಸದುದ್ದೇಶ ದಿಂದ "ಮಹಾ ತಪಸ್ವಿ" ಚಲನಚಿತ್ರದ ಪ್ರೊಡ್ಯೂಸರರಾದ ಶ್ರೀ ತಾಳಿ

ಕೋಟಿ ಶಿವಲಿಂಗಪ್ಪನವರು ಈ ಗ್ರಂಥವನ್ನು ಅಚ್ಚು ಹಾಕಿದ್ದಾರೆ. ಶ್ರೀ ವಿಜಯ ಮಹಾಂತ ಶಿವಯೋಗಿಯಜೀವನ ಚರಿತೆಯನ್ನು ಆಧರಿಸಿದ ಧಾರ್ಮಿಕ ಕನ್ನಡ ಚಿತ್ರ "ಮಹಾ ತಪಸ್ವಿ"ಯ ಬಿಡುಗಡೆಗೆ ಹೆಗಲು ಕೊಟ್ಟ ಶ್ರೀ ಶಿವಲಿಂಗಪ್ಪನವರು ಉದಾರ ಮನಸ್ಸಿನವರೂ, ಉಜ್ವಲ ಧಾರ್ಮಿಕ ಮನೋವೃತ್ತಿಯುಳ್ಳವರೂ ಆಗಿರುವರೆಂದು ಮತ್ತೆ ಬೇರೆ ಹೇಳಬೇಕಾಗಿಲ್ಲ. ಅವರು ಈ ಕೃತಿಯಲ್ಲಿ ತಮ್ಮ ಅತ್ತೆಯವರ ಸಂಸ್ಮರಣೆಯನ್ನು ತಮಗೆ ಮಾತ್ರವಲ್ಲ, ಲೋಕಕ್ಕೂ ಶಾಶ್ವತವಾಗಿ ಉಂಟು ಮಾಡಿದ್ದಾರೆ. ವಿಜಯ ಮಹಾಂತಶಿವಯೋಗಿ ಅವರಿಗೆ ಆಯುರಾರೋಗ್ಯ ಸುಖ–ಸಮೃದ್ಧಿ ಗಳನ್ನು ಕೊಟ್ಟು ಚಿರಂತನವೂ ಕಾಪಾಡಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇವೆ.

ಇಲಕಲ್ಲ
೧೪–೮–೧೯೭೭
ನಾಗರಅಮಾವಾಸ್ಯೆ

ಪ್ರಕಾಶಕರು :
ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ, ಇಲಕಲ್ಲ.

## ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ ಇಲಕಲ್ಲ ಇವರಿಂದ ಪ್ರಕಟಿತವಾದ ಪುಸ್ತಕಗಳು

೧ ಶ್ರೀ ವಿಜಯ ಮಹಾಂತೇಶ್ವರ ಪುರಾಣ —ಚನ್ನಕವಿಗಳು

೨ ಶ್ರೀ ವಿಜಯ ಮಹಾಂತೇಶ್ವರ ಲೀಲಾಮೃತ —ಓತಗೇರಿ ರಾಮರಾಯರು

೩ ಶ್ರೀ ವಿಜಯ ಮಹಾಂತೇಶ್ವರ ಲಾವಣಿ —ಹುಬ್ಬಳ್ಳಿ ಪೂಜ್ಯ ಜಗದ್ಗುರುಗಳು

೪ ಬಸವ ಕಾವ್ಯ ದರ್ಶನಂ —ಪ್ರೊ. ಜಿ. ಎಚ್. ಹನ್ನೆರಡುಮಠ

೫ ಪರಿಚಯ ಪಂಚಾರತಿ —ಪಂ. ಕಲ್ಲೂರ ಸಂಗಣ್ಣ

೬ ಚಿತ್ತರಗಿ ಚಿಜ್ಯೋತಿ —ಪ್ರೊ. ಜಿ. ಎಚ್. ಹನ್ನೆರಡು ಮಠ

೭ ಶ್ರೀ ವಿಜಯ ಮಹಾಂತೇಶ್ವರ ಸುಪ್ರಭಾತ —ಗುರುಸ್ವಾಮಿ ಕಲಕೇರಿ

೮ ಮಹಾಂತ ಕೃತ್ತಿಕೆ —ಬಸವೇಶ್ವರ ತುಪ್ಪದ

೯ ಶ್ರೀ ವಿಜಯ ಮಹಾಂತೇಶ್ವರ ನಾಮಾವಳಿ —ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳು, ಚಿತ್ತರಗಿ ಸಂಸ್ಥಾನಮಠ —ಇಲಕಲ್ಲ

೧೦ ಶ್ರೀ ವಿಜಯ ಮಹಾಂತೇಶ್ವರ ಲೀಲೆ —ಕಲ್ಯಾಣಪ್ಪ ಬ್ಯಾಳಿ

೧೧ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಅಷ್ಟೋತ್ತರ ಶತ ನಾಮಾವಳಿ —ಸಿದ್ಧವೀರ ಕವಿ

೧೨ ಶ್ರೀ ವಿಜಯ ಮಹಾಂತೇಶ್ವರ ಸುಪ್ರಭಾತ —ಪಂ. ಭಾಲಚಂದ್ರ ಶಾಸ್ತ್ರಿಗಳು

೧೩ ಶ್ರೀ ವಿಜಯ ಮಹಾಂತೇಶ್ವರ ಹಂತಿ ಹಾಡುಗಳು —ಶಂಕ್ರಣ್ಣ ನಾಗರಾಳ

೧೪ ಕಾಯಕ ಗೌರಿ ಗಂಗಮ್ಮ —ಡಾ. ಜ. ಚ. ನಿ.

೧೫ ಶ್ರೀ ವಿಜಯ ಮಹಾಂತೇಶ್ವರ ವಚನಗಳು —ಶಂಕ್ರಣ್ಣ ನಾಗರಾಳ

೧೬ ಅಷ್ಟಾವರಣ ಗುಚ್ಛ —ಕಲ್ಯಾಣಪ್ಪ ಬ್ಯಾಳಿ
೧೭ ಮಹಾ ಪ್ರಸಾದ —ಸ. ಪ್ರೊ. ಜಿ. ಎಚ್. ಹನ್ನೆರಡು ಮಠ
೧೮ ಪವಾಡ ಪುರುಷ (ನಾಟಕ) —ಶ್ರೀ ಬಸವರಾಜ ಭಗವತಿ
೧೯ ಮಹಾಂತ ಜ್ಯೋತಿ —ಕಿರಿಯಕಂದ ಮತ್ತು ಈಶ್ವರಕಂದ
೨೦ ಲಿಂಗಗೊಂಚಲು —ಸಂ. ಪ್ರೊ. ಜಿ. ಎಚ್. ಹನ್ನೆರಡುಮಠ
೨೧ ಲಿಂಗಾರ್ಚನವಿಧಿ —ಡಾ. ಜ. ಚ. ನಿ.
೨೨ ಸಂಕ್ಷಿಪ್ತ ಶಿವಪೂಜಾವಿಧಿ
—ಪಂ. ನಾಗಭೂಷಣ ಶಾಸ್ತ್ರಿಗಳು ಧಾರವಾಡ
೨೩ ದಾಂಪತ್ಯ ಧರ್ಮ —ಡಾ. ಜ. ಚ. ನಿ.
೨೪ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಕೀರ್ತನೆ
—ಶ್ರೀಮತಿ ಗುರುದೇವಿತಾಯಿ ಹಿರೇಮಠ ಬೆಂಗಳೂರ
೨೫ ಮಹಾ ತಪಸ್ವಿ (ಜೀವನ ಚರಿತ್ರೆ)
—ಶ್ರೀ ಎಸ್. ಎಸ್. ಭೂಸರೆಡ್ಡಿ ಧಾರವಾಡ
೨೬ ಮಹಾ ತಪಸ್ವಿ ಅರ್ಥಾತ್ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಮಹಾತ್ಮೆ (ನಾಟಕ) —ಪ್ರೊ. ಜಿ. ಎಚ್. ಹನ್ನೆರಡುಮಠ
"ಇಲಕಲ್ಲ.

## ಬೇರೆ ಪ್ರಕಾಶನ ಸಂಸ್ಥೆಗಳಿಂದ ಪ್ರಕಟವಾದ ಪುಸ್ತಕಗಳು

೧ ಚಿತ್ತರಗಿ ಶ್ರೀ ವಿಜಯ ಮಹಾಂತ ಶಿವಯೋಗಿಗಳು
—ಶ್ರೀ ಪಂಚಾಕ್ಷರಿ ಹಿರೇಮಠ (ಇಂಡಿಯಾ ಬುಕ್ ಹೌಸ
ಬೆಂಗಳೂರು)
೨ ಚಿತ್ತರಗಿ ಶ್ರೀ ವಿಜಯ ಮಹಾಂತ ಶಿವಯೋಗಿ
—ಪಂ. ಕಲ್ಲೂರ ಸಂಗಣ್ಣ (ಜ. ಕೊಟ್ಟೂರ ಸ್ವಾಮಿ ಪ್ರಕಾಶನ, ಹೊಸಪೇಟೆ)
೩ ಶ್ರೀ ವಿಜಯ ಮಹಾಂತೇಶ್ವರ ಪುರಾಣ (ಬರಲಿದೆ) —ಚನ್ನಕವಿಗಳು (—ಜಗದ್ಗುರು ಶ್ರೀ ಗಂಗಾಧರ ಧರ್ಮ ಪ್ರಸಾರಕ ಮಂಡಲ; ಮೂರುಸಾವಿರ ಮಠ; ಹುಬ್ಬಳ್ಳಿ)

## ಚಿತ್ತರಗಿ ಶ್ರೀ ವಿಜಯ ಮಹಾಂತ ಶಿವಯೋಗಿಗಳ ಪವಿತ್ರ ನಾಮದಿಂದ ನಡೆಯುತ್ತಿರುವ ಸಂಘ ಸಂಸ್ಥೆಗಳು

೧ ಶ್ರೀ ವಿಜಯ ಮಹಾಂತೇಶ್ವರ ವಿದ್ಯಾವರ್ಧಕ ಸಂಘ, ಇಲಕಲ್ಲ

೨ ಶ್ರೀ ವಿಜಯ ಮಹಾಂತೇಶ್ವರ ಆರ್ಟ್ಸ ಮತ್ತು ಸಾಯನ್ಸ ಕಾಲೇಜ ಇಲಕಲ್ಲ

೩ ಶ್ರೀ ವಿಜಯ ಮಹಾಂತೇಶ್ವರ ಲಲಿತಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ.

೪ ಶ್ರೀ ವಿಜಯ ಮಹಾಂತೇಶ್ವರ ವಿದ್ಯಾವರ್ಧಕ ಸಂಘ, ಹುನಗುಂದ

೫ ವ್ಹಿ. ಎಮ್. ಎಸ್. ಆರ್ಟ್ಸ ಸಾಯನ್ಸ ಕಾಲೇಜ, ಹುನಗುಂದ

೬ ಶ್ರೀ ವಿಜಯ ಮಹಾಂತೇಶ್ವರ ಮಾಧ್ಯಮಿಕ ಶಾಲೆ, ಹುನಗುಂದ

೭ ಶ್ರೀ ವಿಜಯ ಮಹಾಂತೇಶ್ವರ ವಿದ್ಯಾರ್ಥಿನಿಲಯ,

೮ ಶ್ರೀ ವಿಜಯ ಮಹಾಂತೇಶ್ವರ ಪ್ರಸಾದನಿಲಯ ಇಲಕಲ್ಲ

೯ ಶ್ರೀ ವಿಜಯ ಮಹಾಂತೇಶ್ವರ ಪ್ರಸಾದನಿಲಯ, ಹುನಗುಂದ

೧೦ ಶ್ರೀ ವಿಜಯ ಮಹಾಂತೇಶ್ವರ ಪ್ರಸಾದನಿಲಯ, ಚಿತ್ತರಗಿ

೧೧ ಶ್ರೀ ವಿಜಯ ಮಹಾಂತೇಶ್ವರ ಕೋ–ಆಪ. ಅರ್ಬನ್ ಬ್ಯಾಂಕ, ಹುನಗುಂದ

೧೨ ಶ್ರೀ ವಿಜಯ ಮಹಾಂತೇಶ್ವರ ಸೆಂಟ್ರಲ್ ಸ್ಕೂಲ, ಇಲಕಲ್ಲ.

೧೩ ಶ್ರೀ ವಿಜಯ ಮಹಾಂತೇಶ್ವರ ತರುಣ ಸಂಘ, ಇಲಕಲ್ಲ.

೧೪ ಶ್ರೀ ವಿಜಯ ಮಹಾಂತೇಶ್ವರ ಹಾಸ್ಟೆಲ್, ಸೊಲ್ಲಾಪೂರ

೧೫ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ ಇಲಕಲ್ಲ

೧೬ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಗ್ರಂಥ ಮಾಲೆ, ಇಲಕಲ್ಲ.

೧೭ ಶ್ರೀ ವಿಜಯ ಮಹಾಂತೇಶ ಫಿಲ್ಮ ಡಿಸ್ಟ್ರಿಬ್ಯೂಟರ್ಸ ಇಲಕಲ್ಲ.

೧೮ ಶ್ರೀ ವಿಜಯ ಮಹಾಂತೇಶ್ವರ ಗ್ರಾಹಕರ ಸಹಕಾರಿ ಸಂಘ ಇಲಕಲ್ಲ.

ಪೂಜ್ಯ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು
ಚಿತ್ತರಗಿ ಸಂಸ್ಥಾನಮಠ ಇಲಕಲ್ಲ

ಅವರ

# ಉಪನ್ಯಾಸಗಳು

* ಷಟ್‌ಸ್ಥಲ ಚಕ್ರವರ್ತಿ ಚೆನ್ನಬಸವೇಶ್ವರ.

* ಸೊನ್ನಾಲಿಗೆಯ ಸಿದ್ಧರಾಮ ಹಾಗೂ ಅವನ ತತ್ತ್ವಗಳು.

* ವೀರಶೈವರು : ಅಂದು-ಇಂದು.

* ಭಾವೈಕ್ಯತೆ.

* ಚಿತ್ತರಗಿ-ಇಲಕಲ್ಲ ಚರವರ್ಯರಾದ ಶ್ರೀ ವಿಜಯಮಹಾಂತ ಶಿವಯೋಗಿಗಳವರು.

* ಮಹಾಬೆಳಗು " ಶಿವಯೋಗ ಮಂದಿರ ".

## ಮಹಾಂತ ಪೀಠಿಕೆ

ಚಿತ್ತರಗಿ ಶೂನ್ಯ ಪೀಠದ ೧೯ನೆಯ ಜರಾಧಿಕಾರಿಗಳಾದ ಪರಮಪೂಜ್ಯ ಶ್ರೀ ಮ. ನಿ. ಪ್ರ. ಮಹಾಂತ ಶಿವಯೋಗಿಗಳವರ ಲಿಂಗ ದೃಷ್ಟಿಯಲ್ಲಿ "ಲಿಂಗ" ಇದು ಬರೀ ಜಾತಿ ಸೂಚಕವಲ್ಲ.; ಜಾತೀಯ ಸಂಕುಚಿತಭಾವದ ಪ್ರತೀಕವೂ ಅಲ್ಲ. "ಲಿಂಗಮಧ್ಯೆ ಜಗತ್ ಸರ್ವಂ" "ಅರಿದಾಗಿ ಅದರೊಳ್ ಜನಿಸಿದ ಜೀವರೆಲ್ಲರು ಲಿಂಗ ಕೃಪಾ ಕರುಳ್ಗೊಂಚಲು. ಇದನ್ನೇ ಸರ್ವಧರ್ಮದವರು: ಜೀವರು ಪರಮಾತ್ಮದ ಅಣು ರೂಪಗೊಂಚಲು ಎಂದೆನ್ನುವರು. ಆತ್ಮದ ಮೂಲ ಪರಮಾತ್ಮ. ಅಂಗದ ಮೂಲ ಲಿಂಗ. ಇವೆರಡನ್ನು ಒಂದೆ ತೆರನಾಗಿ ಅರ್ಥೈಸುವಲ್ಲಿ ಪಾರಮಾರ್ಥಿಕತೆ ಸಮರ್ಥಗೊಳ್ಳುವದು. ಈ ಮೂಲತತ್ವದ ಸಂಬಂಧದ ಸಂಕೇತವೇ ಲಿಂಗ ಪರಮಾತ್ಮ! ಇದು ದೇಹಧಾರಿಗಳಾದವರೆಲ್ಲರಿಗೂ ಮೀಸಲಾಗಬೇಕಾದ ಶ್ರೀ ಸಂಪತ್ತು; ಶಿವ ಸಂಪತ್ತು. ಅಂತಾದುದಾಗಿಯೇ ವಿಶ್ವಾತ್ಮರಿಗೊಂದು ಈ ಲಿಂಗ ವಿಶ್ವಲಿಂಗವಾಯಿತು. ಈ ಲಿಂಗಧರ್ಮ ವಿಶ್ವಧರ್ಮವಾಗಿ ನಿಂತಿತು.

ಈ ಧರ್ಮದಲ್ಲಿ ಎಲ್ಲ ಧರ್ಮ ತತ್ವಗಳ ಸಾರತ್ವವಿದೆ. ಇದು ಯಾವ ಧರ್ಮಕ್ಕೂ ಹೊರತಾಗಿಲ್ಲ, ಕೊರತೆಯಾಗಿ ಕಿಂಚಿತ್ತಾಗಿಲ್ಲ. ಎಲ್ಲರಿಗೂ ಎಲ್ಲದಕ್ಕೂ ಮಾನ ಸನ್ಮಾನದಿಂದ ಎತ್ತಿಕೊಳ್ಳುವಷ್ಟು ವಿಶ್ವವಿಶಾಲ ತಳಹದಿಯೇ ಲಿಂಗಧರ್ಮ ವೀರಶೈವದ್ದಾಗಿದೆ. ಇದರಲ್ಲಿ ಸಂಕುಚಿತತೆ ಕಲ್ಪಿಸಿ, ಇವರಿಗೆ ಲಿಂಗಧಾರಣೆ ಯೋಗ್ಯ, ಅವರಿಗೆ ಅಯೋಗ್ಯವೆಂದು ನುಡಿದರೆ...ಅದು ನಮ್ಮ ಸಂಕುಚಿತಮನದ ದುರಾಪೇಕ್ಷೆಯೆನ್ನಬೇಕಷ್ಟೆ ತನ್ನ ಅರಿವೇ ಕಳೆಯಾಗಿ ಭಗವದ್ ಕಲೆಯ ನೆಲೆಯಾಗಿ ಬಂದ ಲಿಂಗವು–ಲಿಂಗ ಕೃಪಾಂಗಗಳ ಧರಿಸಿದವರೆಲ್ಲರಿಗೂ ಸಲ್ಲಬೇಕು! ಇದು ವೀರಶೈವಾರ್ಯರ ಘನ ಸಂದೇಶ. ಅಂತೆಯೇ ೧೯ನೆಯ ಚಿತ್ತರಗಿ ಶೂನ್ಯ ಪೀಠಾಧೀಶರಾದ ಪೂಜ್ಯ ಶ್ರೀ ಮಹಾಂತ

ಶಿವಯೋಗಿಗಳವರು—ಲಿಂಗಾಪೇಕ್ಷಿಗಳೆಲ್ಲರಿಗೂ ಲಿಂಗ ಧರಿಸಲಣಿಮಾಡಿ ಕೊಡುವ ಮಹಾನ್ ಕಾಯಕ ಕೈಕೊಂಡಿದ್ದಾರೆ.

ಗುರು—ಶಿಷ್ಯರ, ಜೀವ—ದೇವರ ಸಂಬಂಧ ನಿರ್ಮಿಸುವ ಧಾರ್ಮಿಕ ಬೆಸುಗೆ ಲಿಂಗ. ಅವೆರಡೂ ಒಂದೇ, ಅಂತೆಯೇ ಬೆಸುಗೆ ಬೆಸೆಯುತ್ತೆ. ಅವೆರಡು ಒಂದಾಗಿದ್ದರೆ ಈ ಬೆಸುಗೆ ಅನಾವಶ್ಯಕವಾಗುತ್ತಿತ್ತು. ಲಿಂಗ ಧಾರಣೆಯ ಮಹತ್ಕಾರ್ಯವನ್ನು ಗುರುವಾದವನು ಮಾಡಬೇಕು,ಮಾಡಿಸ ಬೇಕು. ಈ ಕಾರ್ಯವನ್ನು ಅದೆಷ್ಟು ಗುರುಗಳು ಮಾಡಿಸುತ್ತಾರೆ; ಮಾಡುತ್ತಾರೆ? ಎಂದು ಕೇಳುತ್ತಿವೆ ನಾಡಿನ ನಾನಾ ಲಿಂಗಾಯತರೇತರ ಬರಿದಾದ ಎದೆಗಳು. ಗುರು—ಸ್ಥಿರ! ಸ್ಥಿರ! ಸ್ಥಿರ! ಎಂದು ಸ್ಥಿರವಾಗಿ ಕೂತರೆ...ಲಿಂಗದೇವನ ಅಸ್ತಿತ್ವವೇ ಅಸ್ಥಿರವಾದೀತು. ಸ್ಥಿರ ಮರೆತು, ಚರ ಹಿಡಿದು, ನಾಡಿನ ಮೂಲೆ ಮೂಲೆಗಳಲ್ಲಿ ಚರ ಜಂಗಮರಾಗಿ ಚರಿಸಿ, ಲಿಂಗದೇವನಸ್ತಿತ್ವ ತಿಳಿಸಿ, ಲಿಂಗವನ್ನು ಜೀವಿಗಳಂಗದ ಮೇಲೆ ಧರಿಸ ಲಣಿಮಾಡಿಕೊಡುವ ಮಹತ್ಕಾರ್ಯವನ್ನು ಇಲಕಲ್ಲದ ಮಹಾಂತಪ್ಪಗಳು ನಡೆಸುತ್ತ ಎಲ್ಲ ಗುರುಚರಮೂರ್ತಿ ಬಳಗಕ್ಕೆ ಆದರ್ಶ ಪಾಠಿಗರಾಗಿದ್ದಾರೆ.

ಪೂಜ್ಯ ಅಪ್ಪಗಳವರ ಪ್ರತಿನಿತ್ಯದ ಕಾರ್ಯಕ್ರಮವೆಂದರೆ—ಲಿಂಗ ತತ್ವಪರ ಉಪದೇಶ; ಯಾರಿಗೆ ಲಿಂಗವಿಲ್ಲ ಯಾರಿಗೆ ಲಿಂಗ ಬೇಕು ಎಂದು ಖಾನೆಸುಮಾರಿ ಮಾಡಿಸಿ:ಉಪಾಚಾರ್ಯರಿಂದ ಅವರಿಗೆ ದೀಕ್ಷೆ ಕೊಡಿಸಿ ಸತತವಾಗಿ ಲಿಂಗಧಾರಣೆ ಮಾಡಿಸುವದು ನಡದೇ ಇತ್ತು. ಈಗಾಗಲೇ ನಾಡಿನ, ಹೊರ ನಾಡಿನಲ್ಲೆಲ್ಲ ಸಂಚರಿಸಿ ಸುಮಾರು ೫೦ ಸಹಸ್ರ ಲಿಂಗಾ ಪೇಕ್ಷಿಗಳಿಗೆ ಲಿಂಗದೇವನ ಸಾನಿಧ್ಯ- ಕಲ್ಪಿಸಿ ಕೊಟ್ಟಿದ್ದಾರೆ ಪೂಜ್ಯರು. ತಮ್ಮ ಚಿತ್ತರಗಿ ಪೀಠದ ಇಲಕಲ್ಲ—ಹುನಗುಂದಾದಿ ಎಲ್ಲ ಮಠಗಳಲ್ಲಿ ಲಿಂಗ ತಯಾರಿಸುವ ಕಂತಿಗಾರರನ್ನು ಪೀಠಿಕಾ ತಯಾರಿಸುವ ಶಿಲ್ಪಗಾರ ರನ್ನು ಕಲೆ ಹಾಕಿ, ಲಿಂಗರಚನಾ ಮಾಡಿಸಿ, ಲಿಂಗಗಳ ರಾಶಿಗೈಯುತ್ತಿದ್ದಾರೆ. ಪೂಜ್ಯರ ಇಲಕಲ್ಲ ಮಠದಲ್ಲಿ ನೋಡಬೇಕು—ಲಿಂಗಗಳ ರಾಶಿಯೇ ಒಂದು ಕೋಣೆ ತುಂಬಿದೆ. ಲಿಂಗರಾಶಿಗಳ ಮೇಟಗಂಬವು ಮಠವು. ಆ ಮಠಾಧೀಶನೇ ನಿಜವಾದ ಸ್ವಾಮಿ—ಗುರು. ಈ ನಿಜ ತತ್ವದ ನಿಜ ಗುರು— ಸ್ವಾಮಿತ್ವಕ್ಕೆ ಇಲಕಲ್ಲದ ಪೂಜ್ಯಪಾದರು ಒಪ್ಪಿತವಾಗಿದ್ದಾರೆ.

ಲಿಂಗದ ನಡೆಯಂತೆ ನಡೆವನಲ್ಲದೆ
ಲೋಕದ ನಡೆಯಂತೆ ನಡೆವನಲ್ಲ ನೋಡಾ ನಿಮ್ಮ ಶರಣ
ಲಿಂಗದ ನುಡಿಯಂತೆ ನುಡಿವನಲ್ಲದೆ
ಲೋಕದ ನುಡಿಯಂತೆ ನುಡಿವನಲ್ಲ ನೋಡಾ ನಿಮ್ಮ ಶರಣ
ಲಿಂಗದ ಮಚ್ಚಿನಲ್ಲಿ ಸುಳಿವನಲ್ಲದೆ
ಲೋಕದ ಮಚ್ಚಿನಲ್ಲಿ ಸುಳಿವನಲ್ಲ ನೋಡಾ ನಿಮ್ಮ ಶರಣ
ಲಿಂಗದ ವ್ಯವಹಾರದಲ್ಲಿ ಇರುತ್ತಿಹನಲ್ಲದೆ
ಲೋಕದ ವ್ಯವಹಾರದಲ್ಲಿ ಇರನು ನೋಡಾ ನಿಮ್ಮ ಶರಣ
ಇಂತಪ್ಪ ಲಿಂಗಾಂಗ ಸಂಗ ಸಮರಸವನರಿದ ಶಿವಶರಣಂಗೆ
ಶಿವನೆನ್ನಬೇಕಲ್ಲದೇ ಲೋಕದವರೆಂದು ನುಡಿಯುವ
ಸೂತಕ ದೇಹಿಗಳಿಗೆ ಪಾತಕ ತಪ್ಪದಯ್ಯಾ ಅಖಂಡೇಶ್ವರಾ

ಈ ಷಣ್ಮುಖ ಶಿವಯೋಗೀಶನ ವಚನದಂತೆ ಶಿವಶರಣತ್ವದ ಮಹಾ ಘಟ್ಟಿಯಂತಿದ್ದ ಚಿತ್ತರಗಿ ಚರವರ್ಯರಾದ ಇಲಕಲ್ಲದಪ್ಪ ಮಹಾಂತರ ನುಡಿ ಲಿಂಗವಾಗಿದೆ.,ನಡೆ ಲಿಂಗವಾಗಿದೆ,(ನೋಟ ಲಿಂಗವಾಗಿದೆ ಮಾಟ ಲಿಂಗವಾಗಿದೆ, ಒಟ್ಟಾರೆ ಮಹಾಂತರ ನಿರಂಜನ ಜಂಗಮಪೀಠ ಲಿಂಗದಾಟದ ಪ್ರತ್ಯಕ್ಷದರ್ಶಿಯಾಗಿದೆ. ಇಂದು. "ಲಿಂಗದ ನಡೆ, ಲಿಂಗದ ನುಡಿ, ಲಿಂಗದ ನೋಟ, ಲಿಂಗದ ಭೇಟ, ಲಿಂಗದ ಕೂಟ, ಲಿಂಗದಲ್ಲಿ ಮನವಡಗಿರ್ದ ಲಿಂಗಾನುಭವಿಗಳ ಸಂಗದಲ್ಲಿರಿಸಿ ಸಲಹಯ್ಯಾ" ಎಂದು ಹಗಲಿರುಳು ಪರತ್ವದಲ್ಲಿ ಹುರಿಗೊಂಡು ಸಾಗುವ ಮಹಾಂತಪ್ಪಗಳ ಮಾತು–ಮನ–ಬುದ್ಧಿ–ಭಾವಗಳು ಲಿಂಗ ರೂಪವಾಗದಿಹವೆ? ಆಗಿವೆ. ಅಂತೆಯೇ ಅವರು ಸದಾ ಲಿಂಗಮಯ ಜಗದಲ್ಲಿ ಒಳ್ಳಿತ(ಲಿಂಗತ್ವ)ವನ್ನೇ ಕಾಣುತ್ತಾರೆ; ಕಂಡಂತೆ ಜನಕ್ಕೆ ಉಪದೇಶಿಸುತ್ತಾರೆ. ಪರಮಪಾವನತ್ವ ನಡೆ ಅಂದರೆ ಲಿಂಗದ ನಡೆಯಲ್ಲಿ ನಡೆದು, ನಡೆದುದನ್ನೇ ನುಡಿಗಿಳಿಸಿ, ನುಡಿದುದನ್ನೇ ನಡೆಗಿಳಿಸಿ ಲಿಂಗ ಹೂಂಗುಟ್ಟುವಂತೆ ಕಾರ್ಯ ತತ್ಪರ ರಾಗಿದ್ದಾರೆ; ಕಾಯಕವ ಮಾಡುತ್ತಲಿದ್ದಾರೆ. ಆಡಿದಂತೆ ಮಾಡುವ ಮಾಡಿದಂತೆ ಆಡುವ ಮಹಾಂತರ ನುಡಿಗಳು–ಮುತ್ತಿನ ಹಾರ, ಸ್ಫಟಿಕದ ಶಲಾಕೆ, ಲಿಂಗಮೆಚ್ಚಿಗಳು.

ಲಿಂಗ ಶರಣನ ಪಂಚೇಂದ್ರಿಯಂಗಳು
ಲಿಂಗ ಮುಖವಾಗಿ ನಿಂದು
ಮನಸಹಿತ ಪಂಚವಿಷಯಂಗಳಖಿಲ ಸುಖಂಗಳಂ
ಲಿಂಗಾರ್ಪಿತದಿಂದಾಚರಿಸುತ್ತ
ಬೇರೆ ಮತ್ತೊಂದು ದೆಸೆ ಇಲ್ಲದೆ ನಿಂದವು
ಸೌರಾಷ್ಟ್ರ ಸೋಮೇಶ್ವರಲಿಂಗವಾಸಿಯಾದ ಶರಣಂಗೆ !

ಆದಯ್ಯ ಶರಣರ ಈ ವಚನ ವೇದಕ್ಕೆ ಆದರಣೀಯರಾದ ಮಹಾಂತರು ಲಿಂಗಾಂಗಿಗಳು, ಲಿಂಗಾಂತರಂಗಿಗಳು. ಮಹಾಂತಪ್ಪಗಳ ಹತ್ತಿರದ ಒಡನಾಡಿಗಳಿಗರಿವು ಅವರ ಲಿಂಗ ವಿಚಾರ ಪರನುಡಿಗಳು ಲಿಂಗದ ಆರತಿಯ ಬಯಸುವಂತವುಗಳೆಂಬುದು. ಅಂತೇ ಅವರು ನುಡಿವ ನುಡಿಗಳಲ್ಲಿ ಲಿಂಗವಾಗಿವೆ. ಲಿಂಗದಾರತಿಗಳಾಗಿವೆ. ಲಿಂಗ ಸೃಷ್ಟಿಯ ಪ್ರತಿಯೊಂದರ ಚಲನ ವಲನದಲ್ಲಿ ಒಳ್ಳಿತೆಯನ್ನೇ ಅಂದರೆ ಲಿಂಗತ್ವವನ್ನೇ ಕಾಣುತ್ತಾರೆ. ಎಂಬುದಕ್ಕೆ ಒಂದು ಉದಾಹರಣೆ ನೆನಪಿಗೆ ಬಂದಿದೆ ಕೇಳಿ–

ಭಾರತದ ಪ್ರಥಮ ರಾಷ್ಟ್ರಪತಿ ದಿ|| ಬಾಬು ರಾಜೇಂದ್ರ ಪ್ರಸಾದ ಅವರ ಆದೇಶದಂತೆ ೧೯೬೦ ರಲ್ಲಿ ಡಾ|| ಪಂಡಿತ ಪುಟ್ಟರಾಜ ಗವಾಯಿಗಳವರ ಕಾರ್ಯಕ್ರಮ ದಿಲ್ಲಿಯ ರಾಷ್ಟ್ರಪತಿ ಭವನದಲ್ಲಿ ಏರ್ಪಟ್ಟಿತ್ತು. ಆಗ ಪೂಜ್ಯ ಮಹಾಂತಪ್ಪಗಳ ಪುಟ್ಟರಾಜ ಗುರುಗಳ ಕ್ರಿಯಾಮೂರ್ತಿಗಳಾಗಿ ದಯಮಾಡಿಸಿದ್ದರು. ಉಭಯತರೊಂದಿಗೆ ನಾನೂ ಹೋಗಿದ್ದೆ. ಅದು ಬೇಸಿಗೆ ಕಾಲ. ಪೂಜ್ಯರ ಸೇವೆಯಲ್ಲಿ ನಾನಿದ್ದೆ. ಮಣ್ಣ ಹೂಜಿಯೊಂದನ್ನು ಖರೀದಿಸಿ ತಂದು, ಮಡಿ ನೀರ ತುಂಬಿ, ಪೂಜ್ಯರಿಗೆ ಕುಡಿಯಲೆಂದು ಒದ್ದೆಬಟ್ಟೆ ಮುಚ್ಚಿ ಇಟ್ಟಿದ್ದೆ. ಪ್ರಸಾದ ಸಮಯದಲ್ಲಿ ಹೂಜಿಯನ್ನು ನೋಡುತ್ತೇನೆ. ಅರ್ಧಕ್ಕರ್ಧ ನೀರು ಹೂಜಿ ಇಂಗಿಸಿಕೊಂಡಿದೆ. "ಹೂಜಿಯಲ್ಲಿ ಕೇವಲ ಅರ್ಧನೀರು ಮಾತ್ರ ಉಳಿದಿದೆ" ಎಂದು ನಾನಂದಾಗ ಪುಟ್ಟರಾಜರು, "ಆ ಹೂಜಿ ಅರ್ಧ ನೀರು ಕುಡಿದಿದೆ" ಎಂದು ನಕ್ಕರು. "ನಮಗಿಂತಲೂ ಮೊದಲೇ ತಾನು ಅರ್ಧ ನೀರನ್ನು ಕುಡಿದು ಬಿಟ್ಟಿದೆ. ಸ್ವಾರ್ಥ ಎಲ್ಲದರಲ್ಲಿ ಇರುವದೆಂಬುದಕ್ಕೆ ಸಾಕ್ಷಿ ಈ ಹೂಜಿ" ಎಂದು ನಾನೂ ನಕ್ಕೆ. ಆಗ ಈ ಮಹಾಂತಪ್ಪಗಳು "ಹಾಗಲ್ಲ ಗುರುಸ್ವಾಮಿ, ನಮಗೆ ತಂಪು ನೀರು ಕೊಡಲೆಂದು ತಾನು

ಮೊದಲು ನೀರು ಕುಡಿದು ತಂಪಾಗಿದೆ. ಅದು ತಂಪಾದರೆ ತಾನೆ ನಮಗೆ ತಂಪು ನೀರು ? ಅಂದ ಮೇಲೆ ಅದರದೇನು ಸ್ವಾರ್ಥ ಹೇಳು ? ಅದರ ನೀರ್ಗುಡಿತದಲ್ಲಿ ಪರಾರ್ಥ ಗುಣವೇ ತುಂಬಿದೆ ಹೊರತು ಸ್ವಾರ್ಥವಿಲ್ಲ." ಎಂದು ಅಪ್ಪಣೆ ಕೊಡಿಸಿದರು. ಆಗ ಮಹಾಂತರ ನುಡಿಲಿಂಗ ವಿಚಾರಕ್ಕೆ ಪೂಜ್ಯ ಪುಟ್ಟರಾಜರು ಸೈಗುಟ್ಟಿದರು. ನಾನಂತೂ ಪೂಜ್ಯ ಮಹಾಂತರ ಲಿಂಗನುಡಿ ವೈಚಾರಿಕತೆಯ ಪಾವಿತ್ರತೆಗೆ ನಮಿಸಿದೆ.

ಜಗದ ಪ್ರತಿಯೊಂದು ವಸ್ತುವಿನಲ್ಲಿ ಲಿಂಗ ಗತಿಯನ್ನೆ ಲಿಂಗತತಿ-ಯನ್ನೇ ಕಾಣುವಲ್ಲಿ– ಜಗವೇ ಲಿಂಗ; ಜಗದ ಚರಾಚರಗಳು ಲಿಂಗಕ್ರಿಯಾ ಮೂರ್ತಿಗಳೆಂದೇ ಕಾಣುವ ಮಹಾಂತರ ಸನ್ನಿಧಾನ ನನಗೆ ಆಗಾಗ ಲಭಿಸುತ್ತಿರುವದು ನನ್ನ ಭಾಗ್ಯ ವಿಶೇಷವೆನ್ನುವೆ. ಈಗ ಮತ್ತೆ ಒಂದು ಮಹಾಂತರ ನುಡಿಲಿಂಗ ಪ್ರಾಸಾದಿಕ ಪ್ರಸಂಗ ಜ್ಞಾಪಕ ಬಂದಿತು. ಅದನ್ನೂ ಒಂದು ನಿಮಗೆ ಹೇಳಿ ಮುಂದುಲಿಯುವೆ—

ಒಮ್ಮೆ– ಕಾರಿನಲ್ಲಿ ಗದಗಿನಿಂದ ಹಾವೇರಿಗೆ ಹೊರಟಿದ್ದೆವು. ಕಾರು ಜೋರಾಗಿ ನಡೆಯುತ್ತಿದ್ದಂತೆ– ರಸ್ತೆಯ ಮಗ್ಗುಲಲ್ಲಿ ಮಲಗಿರುವ ನಾಯಿ– ದಿಗ್ಗನೆ ಎದ್ದು ಒದರಾಡುತ್ತ– ಕಾರಿನ ಬೆನ್ನು ಹತ್ತಿ– ಕೆಲ ಹೊತ್ತಿನಲ್ಲಿ ಹಿಂದೆ ಬಿದ್ದು ಮತ್ತಷ್ಟು ರೇಗಿ ಕೂಗಾಡಿತು. ಆಗ ನಾನು "ಅವಿವೇಕಿ ನಾಯಿಯ ಬುದ್ಧಿ ನೋಡಿ ಅಪ್ಪಗಳೇ, ತನ್ನ ವೇಗವೇನು ಕಾರಿನ ವೇಗವೇನು ಓಡಿ ಓಡಿ ದಣಿದು ಹಿಂದೆ ಬಿದ್ದಿತು." ಎಂದೆ.

ಆಗ ಮಹಾಂತರು—

"ಅದು ಹಾಗೇಕೆ ವೇಗವಾಗಿ ಓಡುವ ವಾಹನಗಳ ಬೆನ್ನುಹತ್ತುತ್ತದೆ. ಹೇಳು ನೋಡೋಣ ?" ಎಂದು ಕೇಳಿದರು.

ಆಗ ನಾನು ಸ್ವಲ್ಪ ಹೊತ್ತು ವಿಚಾರಿಸಿ—

"ಬಹುಶಃ ಅದಕ್ಕೆ ಹೊಟ್ಟೆ ಕಿಚ್ಚು ಹೆಚ್ಚಾಗಿ ಹಾಗೆ ಬೊಗಳುತ್ತ ಓಡಿ ಬರುತ್ತಿರಬೇಕು ಬುದ್ಧಿ !" ಎಂದೆ.

"ಹೊಟ್ಟೆ ಕಿಚ್ಚು ಏತರ ಸಂಬಂಧ ?"

"ನನಗಿಂತಲೂ ಇದು ವೇಗವಾಗಿ ಏಕೆ ಓಡಬೇಕು" ಎಂಬ ಹೊಟ್ಟೆ ಕಿಚ್ಚಿದಕೆ. ಜತೆಗೆ ನಾನೇನು ಕಡಿಮೆ ಓಡುವೆನೆ ಎಂದು ಓಡ-

ಹತ್ತುವದು, ಹಿಂದೆ ಬಿದ್ದಾಗ ರೊಚ್ಚಿಗೆದ್ದು ಒದರುವದು ಮತ್ತೆ ಮತ್ತೆ ಹಿಂದೆ ಹಿಂದೆ ಬಿದ್ದಾಗ ಮತ್ಸರ– ಸೊಕ್ಕು– ಸಿಟ್ಟುಗಳ ಜತೆಗೆ ರೋಷ ಗೊಂಡು ದಣಿಯುತ್ತದೆ ಒಡಪಾಯಿ ನಾಯಿ."

ಎಂದು ನಗುತ್ತ ಮಹಾಂತರನ್ನು ನೋಡಿದಾಗ ತುಂಬು ನಗುತ್ತಿದ್ದ ಅಪ್ಪಗಳೀಗ ಒಮ್ಮೆಲೆ ನಗು ನಿಲ್ಲಿಸಿ ಹೀಗೆ ಹೇಳುತ್ತಾರೆ :

"ಅದಕ್ಕೇನೇ ಗುರುಸ್ವಾಮಿ ! ಮದ — ಮತ್ಸರಾದಿಗಳಿಗೆ ಈ ಮಾತನಾಡದ ಪ್ರಾಣಿಗಳೂ ಬಲಿಯಾಗುತ್ತಲಿವೆಯಲ್ಲಾ...... ಎಂದು ಮರುಗಿ, ಈ ಪ್ರಾಣಿಗಳೂ ಕೂಡಾ ಅರಿಷಡ್ವರ್ಗಗಳುಪಟಳಕ್ಕೆ ಬಿದ್ದು ಹಾಳಾಗಬಾರದೆಂದು ನಿರ್ಧರಿಸಿ; ನಾಯಿ— ಬೆಕ್ಕು— ಎತ್ತಾಕಳಂಗಳಾದಿ ಪ್ರಾಣಿ— ಪಕ್ಷಿಗಳಿಗೆ ಲಿಂಗ ಕಟ್ಟಿದರು ನಮ್ಮ ಶರಣರು."

ಎಂದೆನ್ನುತ್ತಿದ್ದಂತೆ ಮಹಾಂತರು ಮೋಟಾರಿನ ಕಿಟಿಕಿಯತ್ತ ಮೊಗ ತಿರುವಿ ಶೂನ್ಯದಲ್ಲಿ ದೃಷ್ಟಿ ಬೀರಿದರು.

ಆಗ ನಾನಂ—ಮಹಾಂತಪ್ಪಗಳು : ಜಗದೆಲ್ಲ ಪಶು—ಪಕ್ಷಿಗಳಿಗೆ ಲಿಂಗ ಕಟ್ಟುವ ಮಹಾನ್ ಸಂಕಲ್ಪ ಸಿದ್ಧಿಯಲ್ಲಿ ಮನ–ಭಾವ–ದೃಷ್ಟಿ ಗಳನ್ನು ಈ ಕ್ಷಣ ಅದ್ದಿರಬೇಕೆಂದು ನೆನೆದು ಸುತಿಗೊಂಡೆ. ಸಾಲದೆ ಇದೆ ಸಂಕಲ್ಪದ ಮುನ್ಸೂಚಿ ಎಂಬಂತೆ ವಿಶ್ವದೆಲ್ಲ ಮಾನವರಿಗೆ ಲಿಂಗ ಸಲ್ಲಬೇಕೆಂಬ ಮಹಾನ್ ಕಾಯಕ ಕೈಕೊಂಡಿದ್ದಾರೆ ಎಂಬ ಅರಿವಾಗಿ ಕೈ ಮುಗಿದೆ ಲಿಂಗದಾತ ಮಹಾಂತ ವ್ಯಕ್ತಿತ್ವದ ಪೂರ್ವ ಪೀಠಿಕೆಗೆ.

ವಿಶ್ವದೆಲ್ಲ ವಸ್ತುಗಳಲ್ಲಿ, ವ್ಯಕ್ತಿಗಳಲ್ಲಿ, ಪ್ರಾಣಿಗಳಲ್ಲಿ, ಪಕ್ಷಿಗಳಲ್ಲಿ ಲಿಂಗರೂಪನ್ನೇ ಲಿಂಗಪ್ರಾಣವನ್ನೇ ಲಿಂಗಮನವನ್ನೇ ಲಿಂಗಭಾವವನ್ನೇ ಲಿಂಗಗುಣವನ್ನೇ ಲಿಂಗವಿಚಾರವನ್ನೇ ಲಿಂಗಸಂಚಾರವನ್ನೇ ಕಾಣುವ ಮಹಾಂತರ ಕೃತಿಲಿಂಗಶ್ರೀಕೃತಿ ; ನುಡಿ–ಲಿಂಗದಾರತಿ. ಮಹಾಂತರಾಡಿದ ಮಾತೆಲ್ಲ ಜ್ಯೋತಿರ್ಮಯಲಿಂಗಗಳು ; ಲಿಂಗಮಯ ಜ್ಯೋತಿಗಳು.

ಕುಳಿತಲ್ಲಿ, ನಿಂತಲ್ಲಿ, ಸಭೆಯಲ್ಲಿ, ಸಮ್ಮೇಲನದಲ್ಲಿ, ಸರ್ವಕಾಲದಲ್ಲಿ ಸರ್ವರಂಗದಲ್ಲಿ ಸರ್ವತೋಮುಖವಾಗಿ ಪೂಜ್ಯರದು ಲಿಂಗಪರ– ದುಪದೇಶ; ಪರಲಿಂಗದಾದೇಶ. ಹೀಗಾಗಿ–ಒಟ್ಟು ಮಹಾಂತರುಪ– ದೇಶಿಸುವ ನುಡಿಗಳೆಲ್ಲವೂ ಎಂದೆಂದೂ ಆರದ ಅಮರಾರತಿಗಳು.

ಮಹಾಂತಪೀಠಿಕಾಮಯ ಲಿಂಗದಾರತಿಗಳು. ಪೂಜ್ಯರು ತಮ್ಮ ಜೀವನ ದುದ್ದಕ್ಕೂ ದಿನನಿತ್ಯವೂ ಉಪದೇಶದ ಮಹಾ ಪ್ರದೀಪಿಕೆಯಿಂದ ಕೋಟಿ ಕೋಟಿ ನುಡಿಲಿಂಗದಾರತಿಗಳನ್ನು ಹೊತ್ತಿಸಿದ್ದಾರೆ; ಹೊತ್ತಿ-ಸುತ್ತಿದ್ದಾರೆ. ಅವುಗಳಲ್ಲಿ ಕೆಲವು ನನ್ನ ಭಾಗ್ಯಕ್ಕೆ ಸಿಕ್ಕಿವೆ. ಭಕ್ತಿ ಪುರಸ್ಸರವಾಗಿ ಪೂಜ್ಯ ಮಹಾಂತಲಿಂಗಾತ್ಮರ ನುಡಿಲಿಂಗದಾರತಿಗಳನ್ನು ಈ ಪುಸ್ತಿಕಾಪ್ರಣತೆಯಲ್ಲಿರಿಸಿ, ಸರಗೊಳಿಸಿರುವೆ. ಬೆಳಗಿನೊಳಗಣ ಬೆಳಗು ಮಾಬೆಳಗು ಮಹಾಂತರ ಶ್ರೀಪಾದಕ್ಕೆ ಬೆಳಗಿರುವೆ—ನಿಮ್ಮ ಬೆಳಗಿನ ಕಿರಣದೆಸಳೊಂದು ನನ್ನ ಬಾಳಿಗೆ ಬರಲೆಂದು; ಬಾಳು ಬೆಳ ಕಾಗಲೆಂದು. ನನ್ನಂತೆ—ನೀವೆಲ್ಲ ಓದುಗರು ಬೆಳಗಲಿ; ನಿಮ್ಮೆಲ್ಲರ ಬಾಳು ಬೆಳಕಾಗಲಿ! ಎಂಬುದೇ ನನ್ನ ಮನದಿಚ್ಛೆ. ಅಂತೆಯೇ—ನಿಮಗಾಗಿ ನಿಮ್ಮ ಮುಂದೆ ಮಹಾಂತರ ನುಡಿ ಲಿಂಗದಾರತಿಗಳನ್ನು ಸರಗೊಂಡಿರಿಸಿರು ವೆನು. ಇದೋ! ನೋಡಿ! ನಮಿಸಿ! ಬೆಳಗಿರಿ! ಬೆಳಕಾಗಿರಿ!

* * * *

—"ನಮ್ಮ ಸತ್ಯತ್ವದ ಪ್ರತಿನಿಧಿ ಇಷ್ಟಲಿಂಗ. ಅದರ ಪ್ರತಿಕ್ರಿಯೆ ನಾವು. ನಾವು ಅದರ ಪ್ರಸಾದ; ಅದು ನಮ್ಮ ಪಸಾದ. ಇದೊಂದು ಸರಳ ಸನ್ಮಾರ್ಗ. ಇದೊಂದು ಭಾರತೀಯ ತತ್ವಶಾಸ್ತ್ರದಲ್ಲಿ ಹೊಸ ದೊಂದು ವಿಕಾಸ ಮಾರ್ಗ; ಅರುಹಿನ ಯಾತ್ರೆ."

—"ನಮ್ಮಲ್ಲಿರುವ ಶಿವ ಸ್ಥಿತಿಯನ್ನೇ ನಾವು ಲಿಂಗದ ಮಾಧ್ಯಮ-ದಲ್ಲಿ ಪೂಜಿಸುವ ವೈಜ್ಞಾನಿಕ ವಿಧಾನ ಆರಂಭವಾಯಿತು. ಇದಕ್ಕೆ 'ಸ್ವಯಮೋಪಾಸನೆ' ಎಂದೂ ಕೆಲವರು ಕರೆಯುತ್ತಾರೆ."

—"ಇಷ್ಟಲಿಂಗದ ಮೂಲ ಆಗಮದಲ್ಲಿ ನಮಗೆ ದೊರೆಯುತ್ತದೆ. ಆಗಮ ಪೂರ್ವ ಕಾಲಿನ ಅವಸ್ಥೆಯಲ್ಲಿ ಬಹುಶಃ ಸ್ಥಾವರವು ಸ್ಥಾಯಿ-ಯಾಯಿತ್ತೆಂದು ಊಹಿಸಬಹುದು. ಬ್ರಹ್ಮಾಂಡವು ಪಿಂಡಾಂಡದಲ್ಲುಂಟು, ಪಿಂಡಾಂಡವು ನನ್ನಲ್ಲುಂಟು, ನಾನು ಬ್ರಹ್ಮಾಂಡದಲ್ಲುಂಟು! ಇದು ವಿಶ್ವ ರಹಸ್ಯ; ಲಿಂಗ ಸಾಮರಸ್ಯ."

—"ಇಷ್ಟಲಿಂಗೋಪಾಸನೆ ಅಂದರೆ ಶಿವಪೂಜೆಯು- ನಿತ್ಯವೂ ಸೂರ್ಯನ ಉದಯದಂತೆ ನಡೆಯುತ್ತಿರಬೇಕು. ದಿನ ನಿತ್ಯ ಸಾಗುವ ಶಿವ-

ಪೂಜೆಯೇ ಶಿವಯೋಗವೆನ್ನಿಸಿಕೊಳ್ಳುತ್ತದೆ."

—"ನನ್ನಲ್ಲಿಯೇ ದೇವರಿದ್ದಾನೆ, ಮತ್ತೇಕೆ ಮತ್ತೊಂದು ಲಿಂಗ-ದೇವ ? ಲಿಂಗವೆಂದರೆ ದೃಷ್ಟಿಯೋಗ ಸಾಧನಸಂಪತ್ತಿ. ಅದನ್ನು ಬೇರೆ ತೆರನಾಗಿ ಮಾಡಿದರಾಗದೆ ? ಕೊರಳಲ್ಲಿ ಕಟ್ಟಬೇಕೇಕೆ; ಜಗಲಿಯಲ್ಲಿ ಇಟ್ಟರಾಗದೆ ? ಇವೆಲ್ಲ ಪದವೀಧರ ನಾಸ್ತಿಕ ಬಳಗದ ಚಿಕಿತ್ಸಕ ಪ್ರಶ್ನೆಗಳು. ಇಂಥವರು ಇಷ್ಟಲಿಂಗದ ಸಹಸ್ರಾರು ವರ್ಷಗಳ ಸಾಂಸ್ಕೃತಿಕ, ಸಾಹಿತ್ಯಕ, ಯೌಗಿಕ ಚರಿತ್ರೆಯನ್ನು ಪರಿವೀಕ್ಷಿಸಲಿ ! "

—"ಜೀವನಕ್ಕೊಂದು ಸೂತ್ರ ಬೇಕು ಆಗ ಬದುಕು ಸುಸೂತ್ರ."

—"ನೂರು ಸಂಶಯುಗಳಿಗಿಂತ ಒಂದು ಸಾಧನೆ ಅಧಿಕ".

—"ಭಗವಂತನ ಬಾಗಿಲು ತೆರೆಯುವದು ನಮ್ಮ ತರ್ಕ-ಗಣಿತ ಬುದ್ಧಿಗಳಿಂದಲ್ಲ, ಹೃದಯುವ ಸಮರ್ಪಣೆಯಿಂದ."

—"ಕೇವಲ ನಿರಾಕಾರ ಬ್ರಹ್ಮಕ್ಕೂ ಕೇವಲ ಸಾಕಾರ ವಿಜ್ಞಾನಕ್ಕೂ ಬೀಗತನವಾದುದು ವೀರಶೈವ ಸಿದ್ಧಾಂತದಲ್ಲಿ ಮಾತ್ರ. ಇಲ್ಲಿ ಸಾಕಾರದ ಅರ್ಚನೆ-ಅಭಿಷೇಕಗಳಿಂದ, ನಿರಾಕಾರದ ಅರ್ಪಣೆ-ಸಾಮರಸ್ಯಗಳವರೆಗೆ ಷಟ್‌ಸ್ಥಲದ ಏರು ಉಂಟು, ದ್ವೈತ-ಅದ್ವೈತಗಳು ಪರಸ್ಪರ ವೈರ ಸೂತ್ರಗಳಲ್ಲ; ಅಪೂರ್ವವಾದ ಆತ್ಮನ ಏಕ್ಯಾಭಿನ್ನಾವಸ್ಥೆಗಳು."

—"ಇಷ್ಟಲಿಂಗದ ದೃಷ್ಟಿಯೋಗಾನು ಸಂಧಾನದಲ್ಲಿ ಯೋಗದ ತಾಂತ್ರಿಕ ಪರಿಣತಿಯುಂಟು. ಅಂತರಾತ್ಮನ ಅರಿವಿಗೆ ಅದು ನೇರ ಸನ್ಮಾರ್ಗ; ಸಂಪರ್ಕ."

—"ಆಕಾಶದಲ್ಲಿ ಆಡುತ್ತಿರುವ ಗಾಳಿಪಟಕ್ಕೆ ಸೂತ್ರ ಬೇಕು: ಅಂತೆಯೇ ಜೀವನದ ಬಾನಿನಲ್ಲಿ ಹಾರಾಡುವ ಸಮಗೆ ಸೂತ್ರಾಧಾರವಾಗಿ ಇಷ್ಟ ಲಿಂಗ ಬೇಕು."

—"ಸು-ಸ್ಪಷ್ಟಗೊಳಿಸಲಾಗದ ನಿರಂಜನದವಸ್ಥೆಯಲ್ಲಿಯ ಲಿಂಗ-ವನ್ನು ಪೂಜಿಸುವದು ಕಷ್ಟಸಾಧ್ಯವಾಗಿದೆ. ಅಂತಾಗಿ- ಸಾಕಾರವಿಡಿದು ನಿರಾಕಾರದರ್ಚನೆಯ ಮಾಡುವ ಸರಳ ಸಂಬಂಧವಿದು ಇಷ್ಟಲಿಂಗ."

—"ಲಿಂಗಾನು ಸಂಧಾನಿಗಳ ದರ್ಶನ-ಸ್ಪರ್ಶನ ಮಾತ್ರೇಣ- ಜನ್ಮ ಜನ್ಮಾಂತರದ ಕರ್ಮ ನಿರಶನಗೊಳ್ಳುವದು."

—" ಲಿಂಗ ಪ್ರೇಮಿಗಳೆಮ್ಮಲ್ಲಿ ಬೆಸಗೊಂಡರೆ ಲಿಂಗ ಮೈದೋರಿ ಮಾತಾಡಿದಂತೆ; ಲಿಂಗಾಂಗಯೋಗದವರೆಮ್ಮಲ್ಲಿ ಅರ್ಚನೆಗೊಂಡರೆ ಶಿವಯೋಗ ಮೇಳೈಸದಂತೆ, ಲಿಂಗಾಂಗಿಗಳು ಮಾತಾಡಿದರೆ ಲಿಂಗ ಬಾಯ್ದೆರೆದು ಮುಕ್ತ್ಯಾರ್ಥಿ ಪತ್ಯವ ಕರುಣಿಸಿದಂತೆ ಎಮಗೆ."

—"ಲಿಂಗಪೂಜೆ ಒಂದು ಸಿದ್ಧಾಂತವೂ ಹೌದು, ವಿಜ್ಞಾನವೂ ಹೌದು."

—"ಅರ್ಚನೆ, ಅಭಿಷೇಕ, ಉಪಚಾರ, ಉಪಾಸನೆಗಳು ಸ್ಥಾವರ-ಲಿಂಗ ಮೂರ್ತಿ ಪೂಜೆಯ ವಿಧಾನ. ಇಷ್ಟ ಲಿಂಗಪೂಜೆ ಮಾತ್ರ ಇವು-ಗಳನ್ನು ಬಳಸಿಯೂ ಅತೀತವಾಗಿ ನಿಂತ ಒಂದು ತಂತ್ರ; ಒಂದು ಪದ್ಧತಿ, ಒಂದು ವಿಕಾಸಯಾತ್ರೆ. ಇದೊಂದು ಭಾರತೀಯ ಯೋಗ ಸಮನ್ವಯ ವೆಂದೂ ಪೌರ್ವಾತ್ಯ ಸಿದ್ಧಾಂತದ ತುಟ್ಟ ತುದಿಯ ಹೂಗೊಂಚಲೆಂದೂ ಹೇಳಲಾಗುತ್ತದೆ. ದ್ವೈತ; ಅದ್ವೈತ; ದ್ವೈತಾದ್ವೈತ; ಶಕ್ತಿ ವಿಶಿಷ್ಟಾದ್ವೈತ; ಕರ್ಮ, ಭಕ್ತಿ, ಜ್ಞಾನ, ಮಂತ್ರ, ಹಠ, ಲಯ, ರಾಜ ಮುಂತಾಗಿ ಯೋಗಗಳಿಗೆ ಇದೊಂದು ಏಕೈಕ ಮಣಿಮಂಚ, ಯಾವುದೂ ಇದರಲ್ಲಿ ತ್ಯಾಜ್ಯವಿಲ್ಲ. ಎಲ್ಲವೂ ಅಂಶಿಕವಾಗಿ ಒಂದು ಪೂರ್ಣತ್ವವನ್ನು ವ್ಯವಸ್ಥಿ ಗೊಳಿಸುತ್ತವೆಯೆಂದು ಹಾನಗಲ್ ಕುಮಾರ ಶಿವಯೋಗಿಗಳು ಸಾಧಿಸಿ ತೋರಿಸಿದ್ದಾರೆ."

—"ಯಜುರ್ವೇದದಲ್ಲಿ ಲಿಂಗಸ್ತುತಿ ಇದೆ."

"ರಾಮಾಯಣ, ಮಹಾಭಾರತಗಳಲ್ಲಿ ಲಿಂಗಪೂಜೆ ನಡೆದ ಅನೇಕ ಪ್ರಸಂಗಗಳನ್ನು ಕಾಣುತ್ತೇವೆ."

—"ಮೋಹೆಂಜದಾರೋ- ಹರಪ್ಪಾಗಳ ಉತ್ಖನನಗಳಲ್ಲಿ ಸ್ಥಾವರ ಲಿಂಗಗಳೊಂದಿಗೆ ಇಷ್ಟಲಿಂಗಗಳನ್ನಿರಿಸುವ ಕರಂಡಕಗಳು ದೊರೆತಿವೆ."

—"ಲಿಂಗೋಪಾಸನೆ ವಿಶ್ವದ ಇತಿಹಾಸದಲ್ಲಿ ಅತ್ಯಂತ ಪ್ರಾಚೀನ ಮಾತ್ರವಲ್ಲ. ವಿಶ್ವವ್ಯಾಪಿಯೂ ಹೌದು."

—"ಪಂಡರಪುರದ ಪಾಂಡುರಂಗನ, ಅನಂತಶಯನ ಪದ್ಮನಾಭ, ತುಳಜಾಪುರದ ಭವಾನಿದೇವಿ, ಕೊಲ್ಹಾಪುರದ ಲಕ್ಷ್ಮೀದೇವಿ, ಗವಿಪುರದ ಆಂಜನೆಯ ಮೊದಲಾದ ಮೂರ್ತಿಗಳ ಮಸ್ತಕಗಳ ಮೇಲೆ ಲಿಂಗಧಾರಣವು

ಕಂಡುಬರುತ್ತಿದೆ."

—"ಲಿಂಗಧಾರಣ ಚಂದ್ರಿಕೆ, ಸಿದ್ಧಾಂತ್ ಶಿಖೋಪನಿಷತ್, ವಾತುಲಾಗಮ, ಶಿವಪುರಾಣ, ಸ್ಕಂದಪುರಾಣ, ಪದ್ಮಪುರಾಣ, ಮೊದ-ಲಾದ ಗ್ರಂಥಗಳಲ್ಲಿ ಲಿಂಗತತ್ತ್ವದ ವಿಚಾರಲಿಂಗದ ಸ್ತುತಿಯ ವಿಚಾರಗಳು ದೃಗ್ಗೋಚರವಾಗುತ್ತದೆ."

—"ಐತಿಹಾಸಿಕವಾಗಿ ಲಿಂಗಪೂಜೆಯು ತವರು ಸ್ಥಾವರಪೂಜೆ. ಆದರೆ, ಬಹು ಕಾಲದ ಹಿಂದೆಯೇ ಭಾರತೀಯ ಸಂಸ್ಕೃತಿಯಾತ್ರೆಯಲ್ಲಿ ಸ್ಥಾವರಲಿಂಗದಿಂದ ಇಷ್ಟಲಿಂಗ ಪೂಜೆಯ ಟಿಸಿಲು ಪ್ರತ್ಯೇಕಗೊಂಡಿತು."

—"ಬ್ರಹ್ಮಾಂಡಮಯವಾದ ಲಿಂಗವನ್ನು ಸ್ಥಾವರಗತವಾಗಿ ಅನುಸಂಧಾನಗೊಳಿಸಿ, ಅರ್ಚನೆಗೆ ದಾರಿ ಮಾಡಿ ಗುಡಿ ಕಟ್ಟಿದರು. ಸ್ಥಾವ ರದಲ್ಲಿ ವಿಶ್ವಶಕ್ತಿಯ ಆಹ್ವಾನ–ವಿಸರ್ಜನೆಗಳು ಪ್ರಾರಂಭವಾದವು. ಅಂಗಳದ ಮೇಲಿನ ಲಿಂಗ ಅಂಗದ ಮೇಲೂ ಬಂತು. ಪೂಜೆಯ ಸೌಲಭ್ಯ ಕ್ಕಾಗಿ ಗುಡಿಲಿಂಗ ಎದೆಲಿಂಗವಾಯಿತು.

—"ಲಿಂಗಪೂಜೆ ನಿಷ್ಕ್ರಿಯವಾದವನ್ನಾಗಲಿ ಮಿಥ್ಯಾವಾದವನ್ನಾಗಲಿ ಘೋಷಿಸುವದಿಲ್ಲ, "

—"ಇಷ್ಟಲಿಂಗ ವೀರಶೈವದ ಉಪಾಂಶವಲ್ಲ; ಮೂಲಾಂಗ ಸರ್ವಾಂಗ."

—"ಇಷ್ಟಲಿಂಗವು ವೀರಶೈವಧರ್ಮದ ಕೇಂದ್ರ ಬಿಂದು. ಇದೊಂದನ್ನು ತೆಗೆದು ಬಿಟ್ಟರೆ ಈ ಧರ್ಮದ ಪ್ರಾಣವನ್ನೇ ಕಿತ್ತಂತೆ."

"ಶಕ್ತಿ ವಿಶಿಷ್ಟವಾದ ಶಿವಾದ್ವೈತವೇ ಲಿಂಗಾಂಗ ಸಾಮರಸ್ಯದಗುರಿ."

—"ಲಿಂಗಪೂಜೆ ಒಂದು ಉಪಾಸನೆ ಮಾತ್ರವಲ್ಲ ಅದೊಂದು ಜೀವನ– ವಿವೇಕ ; ಮಾನವತೆಯ ಸಂದೇಶ."

–"ಲಿಂಗಾರ್ಚನೆ ಬಾಳಿನಿಂದ ಸಿಡಿದು ನಿಂತ ಕ್ರಿಯಾರಹಿತ ಅದ್ವೈತ ವಲ್ಲ. ಅದು ಜೀವನಯೋಗದ ಸುಂದರ ಕಲೆ. ಬಾಳಿನ ಕೌಶಲ, ಬದು-ಕಿನ ಭಗವದ್ಗೀತೆ"

—"ಲಿಂಗಾನು ಸಂಧಾನದಿಂದ ಮಲತ್ರಯಗಳು ನಷ್ಟವಾಗಿ ಶಿವತನ ಪ್ರಾಪ್ತವಾಗುತ್ತದೆ. ಆಗ ಕೆಲಸ ಕಾಯಕ; ಜೀವನ ಕೈಲಾಸ,

ದೇಹವೇ ದೇಗುಲ."

—"ಲಿಂಗಪೂಜೆಯೆಂದರೆ ಕೇವಲ ಅರ್ಚನೆ, ಅಭಿಷೇಕಗಳೆಂದು ಬಹುಜನ ತಿಳಿದಿದ್ದಾರೆ, ಹಾಗಿದ್ದರೆ... ಅದು ಮೂರ್ತಿ ಪೂಜೆ ಆದೀತು."

—ದೃಷ್ಟಿ ಯೋಗವು ಶಿವಯೋಗದ ಪ್ರಧಾನ ಲಕ್ಷಣ. ಶಿವ-ಯೋಗವು ಇಷ್ಟಲಿಂಗದ ಪ್ರಧಾನ ಗುರಿ. ಶಿವಯೋಗವಿಲ್ಲದೆ ಇಷ್ಟ-ಲಿಂಗ ಪೂಜೆ ಗೌಣ; ಅದೇ ರೀತಿ ದೃಷ್ಟಿಯೋಗವಿಲ್ಲದ ಇಷ್ಟಲಿಂಗ ಪೂಜೆ ಅವೈಜ್ಞಾನಿಕ ಇಷ್ಟಲಿಂಗಪೂಜೆ ಹಾಗು ಶಿವಯೋಗಿಗಳ ಮಾಧ್ಯ-ಮವೇ ದೃಷ್ಟಿಯೋಗ. ಪ್ರಪಂಚದಲ್ಲಿ ಹಲವು ಬಗೆಯ ದೃಷ್ಟಿಯೋಗ-ಗಳುಂಟು, ಆದರೆ, ಅವು ಸಕೃದ್ದರ್ಶನದಲ್ಲಿ ಯೋಗಗಳಲ್ಲ; ತಂತ್ರಗಳು, ಆದರೆ ವೀರಶೈವರ ದೃಷ್ಟಿಯೋಗವು ತಂತ್ರವೂ ಹೌದು; ಯೋಗವೂ ಹೌದೆಂಬುದು ಹಾನುಗಲ್ಲ ಕುಮಾರ ಶಿವಯೋಗಿಗಳ ಸಿದ್ಧಾಂತ."

—"ಸುಮಾರು ೫೦೦೦ ವರುಷಗಳ ಪೂರ್ವದ ಹರಪ್ಪಾ-ಮೋಹೆಂಜದಾರೋ ಸಂಸ್ಕೃತಿಯ ಕಾಲದಲ್ಲಿಯೇ ಈ ದೃಷ್ಟಿಯೋಗ ಅಸ್ತಿತ್ವದಲ್ಲಿತ್ತು. ಇತಿಹಾಸದ ಪುಟಗಳು ಮರೆತು ಬಿಟ್ಟ ಅಸಂಖ್ಯಾತ ದೃಷ್ಟಿಯೋಗದ ಮಹಾಶಿವಯೋಗಿಗಳು ಸಹಸ್ರಾರು ವರ್ಷಗಳಿಂದ ಬಾಳಿ, ಬೆಳಗಿ ಹೋಗಿದ್ದಾರೆ. ಚನ್ನಬಸವ- ಪ್ರಭುದೇವರ ವಚನಗಳು ದೃಷ್ಟಿಯೋಗಾನುಸಂಧಾನದ ಸೂಕ್ಷ್ಮಕ್ಕೆ ನಮ್ಮನ್ನು ಕೊಂಡೊಯ್ಯುತ್ತವೆ."

—"ಅರವಿಂದರ ಸೈಕಿಕ್ ಸೆಂಟರ್ (ಚೈತ್ಯ ಪುರುಷ) ಜಾಗ್ರತಿ, ಇಲ್ಲವೆ ದೃಷ್ಟಿ ಯೋಗಿಗಳ ಮೂರನೆಯ ಕಣ್ಣಿನ (ಪಿನಿಯಲ್ ಗ್ರಂಥಿ) ಜಾಗ್ರತಿ; ಇವೆಲ್ಲ ಪರಿಣತವಾದ ತಂತ್ರಗಳು. ಈ ಬಗೆಯ ಪ್ರಯೋಗಕ್ಕೆ ಆಧುನಿಕ ನರಮಂಡಲ ವಿಜ್ಞಾನಿಗಳು, ಶರೀರ ಶಾಸ್ತ್ರಜ್ಞರೂ, ಮಾನಸ-ಶಾಸ್ತ್ರಜ್ಞರೂ ಶಿವಯೋಗವಿಜ್ಞಾನಿಗಳೂ ಕೂಡಿಕೊಂಡು ದೃಷ್ಟಿಯೋಗದ ಬಗೆಗೆ ವೈಜ್ಞಾನಿಕವಾಗಿ ಪ್ರಯೋಗ ನಡೆಸಬೇಕು. ಇದಕ್ಕೆ ವೈಜ್ಞಾನಿಕ ಸತ್ಯ ದರ್ಶನ ದೊರೆತರೆ ಇದೊಂದೇ ಅಮೇರಿಕೆಯ ಚಂದ್ರಲೋಕ-ಯಾತ್ರೆಗಿಂತಲೂ ಅಧಿಕವಾದ ಅನುಭವವಾದೀತು."

—"ಅಂಗ ಮರವೆಯ ರೂಪ; ಲಿಂಗ ಅರುಹಿನ ನಿಲವು.

—" ಲಿಂಗವಿಲ್ಲದ ಅಂಗ ಭವಿ– ಗಂಡನಿಲ್ಲದ ಗೃಹಿಣಿಯಂತೆ.

—" ಲಿಂಗ ಸಂಬಂಧದ ವಿಧಾನ ವೀರಶೈವರಲ್ಲಿ ಭಾವುಕ ಇಲ್ಲವೆ ಭ್ರಾಮಕ ಕಲ್ಪನೆ ಅಲ್ಲ; ಅದಕ್ಕೆ ಶಾಸ್ತ್ರೋಕ್ತ ವಿಶ್ಲೇಷಣೆಯುಂಟು. ನಮಗಿರುವ ಮೂರು ದೇಹಗಳು: ಸ್ಥೂಲ, ಸೂಕ್ಷ್ಮ, ಕಾರಣ (Physical body, Uittal body universal body ) ಎಂಬುದಾಗಿ ಈ ಮೂರು ದೇಹಗಳಿಗೂ ಆಗಮ ಋಷಿಗಳು ಹಾಗು ಶರಣರು ಲಿಂಗಸಂಬಂಧ ಹೇಳಿದ್ದಾರೆ, ಸ್ಥೂಲ ಶರೀರಕ್ಕೆ ಇಷ್ಟಲಿಂಗ, ಸೂಕ್ಷ್ಮ ಶರೀರಕ್ಕೆ ಪ್ರಾಣಲಿಂಗ, ಹಾಗು ಕಾರಣ ಶರೀರಕ್ಕೆ ಭಾವಲಿಂಗಗಳ ಸಂಬಂಧವುಂಟು.

—" ಶತ್ರುಗಳು ಪ್ರವೇಶಿಸುವ ಕೋಟೆಯ ಬಾಗಿಲಲ್ಲಿ ಕಾವಲು ಸೇನೆಯನ್ನು ನಿಲ್ಲಿಸುವಂತೆ– ಶರಣರು ಈ ಪಂಚೇಂದ್ರಿಯಂಗಳ ಬಾಗಿಲಿಗೆ ಲಿಂಗಗಳನ್ನು ನಿಲ್ಲಿಸಿದ್ದಾರೆ. ಮೂಗಿನಲ್ಲಿ ಆಚಾರಲಿಂಗ; ನಾಲಿಗೆಯಲ್ಲಿ ಗುರುಲಿಂಗ; ಕಣ್ಣಿನಲ್ಲಿ ಶಿವಲಿಂಗ; ಚರ್ಮದಲ್ಲಿ ಜಂಗಮಲಿಂಗ; ಕಿವಿಯಲ್ಲಿ ಪ್ರಸಾದಲಿಂಗ, ಹೃದಯದಲ್ಲಿ ಮಹಾಲಿಂಗಗಳು ನಿಂತು ಮನವೆಂಬ ಮುತ್ತೈದೆಯ ಮಾನವನ್ನು ಕಾಪಾಡುತ್ತವೆ. ಇದು ಸಹಜ ಶಿವ-ಯೋಗ–ಭೋಗಗಳೆಲ್ಲ ಲಿಂಗಾರ್ಪಿತವಾಗಿ ಸಲ್ಲುತ್ತವೆ. ಪಂಚೇಂದ್ರಿಯ ಗಳಿಂದ ಪ್ರವೇಶಿಸುವ ಗಂಧ, ರಸ, ರೂಪ, ಸ್ಪರ್ಶ ಶಬ್ದಗಳು ಭೋಗಗಳು ಪ್ರವೇಶದ್ವಾರದಲ್ಲಿಯೇ ಲಿಂಗಸಂಸ್ಕಾರ ಪಡೆದು ಪ್ರಸಾದ ವಾಗಿ ಮಹಾಲಿಂಗಕ್ಕೆ ಅರ್ಪಿವಾಗುತ್ತವೆ; ಇದರಿಂದ ಭೋಗ ಶರೀರವು ಯೋಗ ಶರಿರವಾಗುತ್ತದೆ. ಅರವಿಂದರು ಹೇಳುವ ಭೌತಿಕಪಲ್ಲಟ, ಪ್ರಾಣಪಲ್ಲಟ, ಮನಃಪಲ್ಲಟ, ಯೋಗ ವಿಚಾರಕ್ಕೂ ಶರಣರ ಈ ಸಹಜ ಯೋಗ ಭಾಷೆಗೂ ನೂರಕ್ಕೆ ನೂರು ಸಂಬಂಧವುಂಟು. ೨೦ನೇ ಶತಮಾನದ ಶ್ರೀ ಅರವಿಂದರ ಅಮರವಾಣಿಯ ತಾಯಿಬೇರು ೧೨ನೇ ಶತಮಾನದ ಶರಣವಾಣಿಯಲ್ಲಿ ಕಂಡಾಗ ಯಾರಿಗೆ ತಾನೆ ಆನಂದವಾಗಲಿಕ್ಕಿಲ್ಲ ? "

—"ದೀಕ್ಷಾವಿಧಿಯಿಂದಲೇ ಶಿವಯೋಗದ ಯಾತ್ರೆ ಪ್ರಾರಂಭ ವಾಗುತ್ತದೆ. ಆಣವ, ಮಾಯಾ, ಕಾರ್ಮಿಕ ಮಲಗಳ ನಾಶದಿಂದ, ಬದ್ಧ ವಾದ ಜೀವ ಶುದ್ಧನಾಗುತ್ತಾನೆ. ಅರ್ಚನ–ಅಭಿಷೇಕ ಧ್ಯಾನ–ದರ್ಶನ

ಗಳಿಂದ ಸಿದ್ಧನಾಗುತ್ತಾನೆ. ತನ್ನ ಯೋಗಶಕ್ತಿಯನ್ನು ಲೋಕಕ್ಕೆ ನೀಡಿ ಶಿವಯೋಗಿಯಾಗುತ್ತಾನೆ. ಆಗ ಜೀವನವೇ ಲಿಂಗ; ಲಿಂಗವೆ ಜೀವನ. ಇದೆ ಶಿವಯೋಗ."

—"ಶರಣರ ವಚನಗಳು ಇಷ್ಟಲಿಂಗ ಪೂಜೆಯೊಂದಿಗೆ ನಡೆಸಿದ ಭಕ್ತಿ–ಪ್ರೇಮದ ಆವಿಷ್ಕಾರಗಳು."

—"ಇಷ್ಟಲಿಂಗವು ಮೂರ್ತಿಯಲ್ಲ, ಪಾಷಾಣವಲ್ಲ, ಅದೊಂದು ಕುರುಹು ಆ ಕುರುಹಿನ ಮೂಲಕ ಅರುಹನ್ನು ಆರಾಧಿಸುತ್ತೇವೆ: ಮರ ಹನ್ನು ಕಳೆಯುತ್ತೇವೆ, ಚಿರವನ್ನು ಪಡೆಯುತ್ತೇವೆ. ಇಷ್ಟಲಿಂಗವು ವಿಶ್ವದ ಸಾಂಕೇತಿಕ ಸ್ವರೂಪ. ಅದು ಅನಾದಿ, ಅನಂತ, ಅತೀತ, ಅಪ್ರಮೇಯ"

—"ಶರಣರು ಲಿಂಗಪೂಜೆಯಲ್ಲಿ ಶರಣ ಸತಿ, ಲಿಂಗ ಪತಿ ಭಾವವನ್ನು ಕಾಣಲು ಹವಣಿಸಿದರು. ಇದಕ್ಕೆ ಸತಿ–ಪತಿ ಭಾವವೆಂದು ಹೆಸರು ಆತ್ಮನ ಯಾತ್ರೆಯಲ್ಲಿ ಇದೊಂದು ಸುಂದರ ರೂಢಿ."

—"ಅಂಗ–ಲಿಂಗಗಳ ಕೂಟ ಗಂಡ–ಹೆಂಡಿರ ಕೂಟವಲ್ಲ. ಒಂದಾಗಿ ಎರಡಾಗದ ಸುಂದರ ಸಾಮರಸ್ಯ; ಕೂಡಿದ ಮೇಲೆ ಅಗಲಿಕೆ ಇಲ್ಲ."

—"ಲಿಂಗ ಪೂಜೆಯ ತುಟ್ಟ–ತುದಿಯ ಬೆಟ್ಟದ ಮೇಲೆ ಕರೆದೊಯ್ಯಬಲ್ಲ ಮಹಾ ಶಕ್ತಿ ಪ್ರಭುದೇವ"

—"ಇಷ್ಟಲಿಂಗಕ್ಕೂ–ವಿಶ್ವಲಿಂಗಕ್ಕೂ ತಾಳ–ಮೇಳ ಹಾಕುವನು ಪ್ರಭುದೇವ, ಲಿಂಗದ ವಿಶ್ವರೂಪಿ ದರ್ಶನದಲ್ಲಿ ಗಗನವೇ ಲಿಂಗದ ಗುಂಡಿಗೆಯಂತೆ; ಸೂರ್ಯ–ಚಂದ್ರರೇ ಲಿಂಗಕ್ಕೇರಿಸುವ ಹೂಗಳಂತೆ; ಬ್ರಹ್ಮನೆ ಧೂಪವಂತೆ; ವಿಷ್ಣುವೇ ದೀಪವಂತೆ, ಇದು ಪ್ರಭುಗೈವ ಗುಹೇಶ್ವರ ಲಿಂಗದ ಪೂಜಾವಿಧಾನ"

—"ಇಷ್ಟಲಿಂಗವು ಸಮಷ್ಟಿಯ ಪ್ರತೀಕ. ಭಕ್ತನಿಗೆ ಇಷ್ಟಲಿಂಗ–ವಿದ್ದ ಎಡೆಯೇ ಸುಕ್ಷೇತ್ರ; ಪವಿತ್ರತೀರ್ಥ."

—"ಸ್ಥಾವರಪೂಜೆ ಪುಣ್ಯಾರ್ಜನೆಗಾಗಿ. ಇಷ್ಟಲಿಂಗದ ಅನು–ಸಂಧಾನ ಕೈವಲ್ಯಕ್ಕೆ; ಶಿವಯೋಗ–ಸಿದ್ಧಿಗೆ."

—"ಶರಣನ ಅಂಗವೇ ಪರಮಪಾವನ ಸುಕ್ಷೇತ್ರ ಅದನ್ನುಳಿದು

ಕಾಶಿ–ಕೇದಾರಗಳಿಗೆ ನಡೆದರೆ...ತನ್ನ ಲಿಂಗಕ್ಕೆ ತಾನೇ ಅವಮಾನ ತಂದು ಕೊಂಡಂತೆ.

—"ದೇಹವೇ ದೇವಾಲಯವಾದ ಮೇಲೆ ಬೇರೆ ದೇವಾಲಯದ ಅವಶ್ಯಕತೆ ಇಲ್ಲ. ಪ್ರಾಣವೇ ಲಿಂಗವಾದ ಮೇಲೆ ಮತ್ತೆ ಬೇರೆ ಲಿಂಗದ ಉಪಯೋಗವಿಲ್ಲ. ಗುಡಿಲಿಂಗ–ಶಿಲಾಲಿಂಗ ಕಲ್ಲು. ಆ ಲಿಂಗವೇ ಕಲ್ಲಾದ ಮೇಲೆ ಲಿಂಗದ ಭಕ್ತನಾದ ನಾನು ಏನಾದೆ? ಎಂದು ಪ್ರಶ್ನಿಸುವಲ್ಲಿ ಸ್ಥಾವರವ ನಂಬಿದವರಿಗೆ ಮಾರ್ಮಿಕ ಉತ್ತರ ಕೊಟ್ಟಿದ್ದಾರೆ ಪ್ರಭುದೇವರು."

—"ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಇದೊಂದೇ ಪಂಕ್ತಿ ಸಾಕು, ವೀರಶೈವ ಧರ್ಮದ ಸಾರಾಯ ಸಂಪತ್ತಿಗೆ ವೈಜ್ಞಾನಿಕವಾಗಿ ಯಾವ ವಸ್ತುವೂ ಸ್ಥಿರವಲ್ಲ, ಪರಿಣಾಮ ಹೊಂದುತ್ತ ಬದಲಾವಣೆ-ಯಾಗುವದು ಸತ್ಯ, ಮಣ್ಣು ಶಿಲೆಯಾಗುತ್ತದೆ. ಶಿಲೆ ಗರಸಾಗುತ್ತದೆ. ಗರಸು ಗಚ್ಚಾಗುತ್ತದೆ. ಭೂಮಿ ಗೊಬ್ಬರವಾಗುತ್ತದೆ. ಗೊಬ್ಬರ ಮರ ವಾಗುತ್ತದೆ. ಮರ ಫಲಪುಷ್ಪವಾಗುತ್ತದೆ. ಫಲ-ಪುಷ್ಪ ಅದು ಆಹಾರ ವಾಗುತ್ತದೆ. ಆಹಾರ ರಕ್ತವಾಗುತ್ತದೆ. ರಕ್ತ ಶಕ್ತಿಯಾಗುತ್ತದೆ. ಶಕ್ತಿ ಕಾರ್ಯವಾಗುತ್ತದೆ. ಕಾರ್ಯ ಕಾಯಕವಾಗುತ್ತದೆ. ಲೋಕದ ಅರ್ಥವೇ ಜಂಗಮ ಸ್ಥಿತಿಯು. ಸ್ಥಾವರವಾಗಿ ನಿಂದ ಗುಡಿಗಳು ಧ್ವಂಸವಾದವು ಜಂಗಮತ್ವಕ್ಕೆಲ್ಲಿಯ ನಾಶ? ಆದ್ದರಿಂದ ಜಂಗಮಸೂತ್ರದ ಕರದಿಪ್ಪ ಲಿಂಗ ದೊಂದಿಗೆ ಒಡೆವೆರೆಯುವದೇ ಮುಕ್ತಿ."

—"ಮಾತು–ಮನ–ಭಾವ–ದೃಷ್ಟ್ಯಾಂಗಗಳೆಲ್ಲ ಲಿಂಗಮಯವಾಗ ಬೆಕೆಂಬುದೇ ಲಿಂಗಾತ್ಮನ ದಿವ್ಯ ಸಂದೇಶ."

—"ಎಲ್ಲದರಲ್ಲಿ ಒಳ್ಳೆಯದನ್ನೇ ಕಾಣಬೇಕೆಂಬುದೇ ಲಿಂಗದೃಷ್ಟಿ. ಒಳ್ಳೆಯದನ್ನೇ ಕೇಳಬೇಕೆಂಬುದೇ ಲಿಂಗಕರ್ಣ. ಒಳ್ಳೆಯದನ್ನೇ ಆಸ್ವಾದಿಸ ಬೇಕೆಂಬುದೇ ಲಿಂಗನಾಶಿಕೆ. ಒಳ್ಳೆಯದನ್ನೇ ಮುಟ್ಟಬೇಕೆಂಬುದೇ ಲಿಂಗ ತ್ವಕ್ಕು. ಒಳ್ಳೆಯದನ್ನೇ ಸೇವಿಸಬೇಕೆಂಬುದೇ ಲಿಂಗಾಂಗ. ಒಳ್ಳೆಯದನ್ನೇ ಸಾಧಿಸಬೇಕೆಂಬುದೇ ಲಿಂಗಾಂಗಯೋಗ."

—"ಎಲ್ಲ ಧರ್ಮಗಳು ಲಿಂಗಧರ್ಮದ ಅಂತರಂಗಗಳು; ಎಲ್ಲ ಧರ್ಮ ದವರು ಲಿಂಗಾತ್ಮನ ಕರಳುಗಳು; ಎಲ್ಲದರಲ್ಲಿ ಲಿಂಗಸತ್ಯೆ ಸಾಧಿಸುವದೇ

ಆಗಿದೆ ನಮ್ಮ ಲಿಂಗಧ್ಯೇಯವು,"

—"ಲಿಂಗವಂತಧರ್ಮಾನುಯಾಯಿಗಳು ನಮ್ಮ ಮನೆಯವರು; ಲಿಂಗಾಯತರೇತರ ಸರ್ವ–ಧರ್ಮಾನುಯಾಯಿಗಳು ನಮ್ಮ ಮನದವರು."

—"ನಿನಗಾಗಿ ನೀನು ಬದುಕಿ ಸತ್ತರೆ ಲಿಂಗ ಅಳುತ್ತದೆ; ಪರರಿಗಾಗಿ ನೀನು ಬದುಕಿ ಬೆಳಕಾದರೆ ಲಿಂಗ ನಗುತ್ತದೆ,"

—"ಸದ್ಗುಣ; ಸದ್ಭಾವ, ಸದ್ವಿಚಾರ, ಸದಾಚಾರಗಳೆಲ್ಲವೂ ಮಾನವನಿಗೆ ಬರಬೇಕಾದ ಇರಬೇಕಾದವುಗಳು ಅವೆಲ್ಲ ಲಿಂಗದೇವನ ಚಿರಾಸ್ತಿಗಳು ಅಂದರೆ ಜಂಗಮಾಸ್ತಿಗಳು."

—"ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ಇದಿರು ಹಳಿಯಲು ಬೇಡ ಇವೆಲ್ಲರಿಗೂ ಬೇಕಾದ ಬಸವಲಿಂಗ ನುಡಿ ಸೂಕ್ತಗಳು. ಇವು ಯಾರಿಗೆ ಬೇಡ? ಇವು–ವಿಶ್ವ ಮಾನವೀಯ ಕುಲಕ್ಕೆಲ್ಲ ಬೇಕು; ಮನಸಾ ಆದರಿಸಬೇಕು, ಅಂದಾಗ ವಿಶ್ವ ಚಲುವಾದೀತು. ವಿಶ್ವ ಮಾನವ ಕುಲವೆಲ್ಲ ಒಂದಾದೀತು."

—"ಲಿಂಗಮತೋದ್ಧಾರಿ ಬಸವ ಭಾನುವಿನ ಬೆಳಗು ವಿಶ್ವ ವಿಸ್ತರಿಸಿ, ವಿಶ್ವವನ್ನೇ ಆವರಿಸಿ ಬೆಳಗುವ ಅಮರ ಬೆಳಗು. ವಿಶ್ವವೇ ಲಯವಾದರೂ ಈ ಬೆಳಗಿಗಿಲ್ಲ ಲಯವೆಂಬುದು. ಲಯಕ್ಕೆ ಶಿಲುಕದ ಶಿವ ಚೇತನೀಯ ಬೆಳಗು ಅದು."

—"ಶಿವಶರಣರು ಬಲು ಹಿರಿಯರು. ಸಕಲ ಲೋಕಗಳನ್ನೇ ತನ್ನಾಂತರಂಗವಾಗುಳ್ಳ ಲಿಂಗದೇವ ಶಿವನನ್ನೇ ಆಳಾಗಿಸಿ ದುಡಿಸಿಕೊಂಡವರು."

—"ಬಸವಾದಿ ಪ್ರಮಥರಲ್ಲಿ; ರೇಣುಕಾದ್ಯಾಚಾರ್ಯರಲ್ಲಿ; ಪುರಾತನರಲ್ಲಿ ಭೇದವೇ ಕಾಣುತ್ತಿಲ್ಲ, ನಮಗೆ. ಅವರೆಲ್ಲ ಲಿಂಗ ರೂಪಿಗಳು; ಶಿವತತ್ವವನ್ನು ದಿಗ್ದಿಗಂತ ಮೊಳಗಿಸಿದ ಲಿಂಗಾತ್ಮರು; ಜಗದ್ವಂದ್ಯರು.

—ಪುರಾತನ ತತ್ವ ಸಾಹಿತ್ಯವು ಹೊಸರೂಪ ಧರಿಸಿ ಪುನರ್ಜನ್ಮ ಪಡೆದದ್ದು ಹಾನಗಲ್ಲ ಗುರುಕುಮಾರ ಶಿವಯೋಗಿಗಳವರ ಅವತಾರದಿಂದ. ಅವರ ಅಂದಿನ ಸದಾಶಯವನ್ನು ಇಂದಿಗೂ ಜಂಗಮ ಪೀಠಗಳು ಈಡೇರಿ

ಸುತ್ತ ಬಂದಿರುತ್ತವೆಂಬುದು ಸಮಗ್ರತೆಯ ಸಂತಸವನ್ನುಂಟು ಮಾಡಿದೆ.

—"ಒಲಿಗೆ ಮೂರು ಗುಂಡು, ಅದರಿಂದ ಇಹ ಜೀವನ ಕಳೆಗೊಂಡಂತೆ–ಶಿವಕಲೆಯೇ ಗುರು–ಲಿಂಗ–ಜಂಗಮ ತ್ರಿಮೂರ್ತಿಗಳಿಂದ ಪರರ ಜೀವನ ಕಳೆಗೊಂಡಿದೆ."

—"ಹಾನಗಲ್ಲ ಶಿವಯೋಗಿಗಳ ಅವತಾರವೆಂದರೇನೆ ಧರ್ಮಾವತಾರವೆಂದು, ಲಿಂಗಾವತಾರವೆಂದು ನಿಜ ನುಡಿಯಬೇಕು."

ಹೊರೆ ಪತ್ರಿ– ಹೂಗಳನ್ನು ಅಪೇಕ್ಷೆ ಲಿಂಗಾಂಗಿರುವದಿಲ್ಲ. ಆತನಿಗೆ ಸಾಕು ಭಕ್ತಿ ದಳವೊಂದು. ವಿರತಿ ಹೂವೊಂದು."

—"ಮಕ್ಕಳ ಬುದ್ಧಿ ದೇವ ಬುದ್ಧಿ. ಅದರಷ್ಟು ಪವಿತ್ರಯಾವುದು?"

—"ಚಿತ್ತರಗಿ ಪೀಠಕ್ಕೆ ಸದಾಶಿವನು ಆಗಾಗ ದಯಮಾಡಿಸುತ್ತಾನೆ ಎಂಬ ಕುರುಹಾಗಿ ಹಾನಗಲ್ಲ ಶ್ರೀಗಳು, ಹುಬ್ಬಳ್ಳಿ ಜಗದ್ಗುರು ಮಹಾ ಸನ್ನಿಧಿಯವರು ಪದೆ ಪದೆ ದಯಮಾಡಿಸುತ್ತಿರುವರು."

—"ಹನ್ನೆರಡು ವರುಷ ಕಂಡಂತೆ ವಿಜಯ ಮಹಾಂತಪ್ಪಗಳು ಚಿತ್ತರಗಿಯ ಚಿಜ್ಯೋತಿ. ಅದು ಬಸವ ಬೆಳಗಿನ ಅಮರಾಕೃತಿ. ಆ ಬೆಳಗು ಚಿತ್ತರಗಿಯ ಭಕ್ತರಿಗೆ ಪ್ರತ್ಯಕ್ಷ."

—"ಭಸ್ಮ, ರುದ್ರಾಕ್ಷಿಗಳಾದಿಯಾಗಿ ವೀರಶೈವ ಸಂಪನ್ನತೆಯ ಸಂಕೇತಗಳ ಸಮೃದ್ಧಿಗೆ ಅಕ್ಷಯ ನೀಡಿದವನು, ಕಾವಿಗೆ ಬೆಲೆ ನೀಡಿದವನು; ಗುರು–ವಿರತ ಮಠಗಳಿಗೆ ಕಳೆ ತಂದವನು ಹಾನ್ಗಲ್ಲಿನ ಕಾರಣಿಕ ಕುಮಾರ ಶಿವಯೋಗಿ."

—"ಸಾಮಾನ್ಯರ ಮಧ್ಯದಲ್ಲಿ ಅಸಾಮಾನ್ಯನಾಗಿ ಬಾಳಿ, ಬೆಳಕಾಗಿ, ಬೆಳಗಿ, ಬೆಳಗಿನೊಳ ಬೆಳಗಾಗಿ ಶಿವಚಿದ್ ಬೆಳಗಾಗಿ ಶಿವಯೋಗ ಮಂದಿರದಲ್ಲಿ ಬೆಳಗುವದು ಸದಾ ಶಿವವಾಗಿ ಹಾನಗಲ್ಲ ಶಿವಯೋಗಿಯ ಲಿಂಗ ದೇಹ."

—"ಕಣ್ಣುಗಳೆರಡಿದ್ದರೂ ನೋಡುವ ದೃಷ್ಟಿ ಬುದಿಲ್ಲವೇನು? ಹಾಗೆ–ಜೀವ–ಶಿವರೆರಡಾಗಿದ್ದರೂ ಕೂಡುವ ಲಿಂಗಯೋಗ ಒಂದು."

—"ಲಿಂಗ ಕಲ್ಲೆಂದು ಹೀಯಾಳಿಸುವವನನ್ನು ಆ ಲಿಂಗಶಕ್ತಿ ಮಾತ್ರ ಹೀಯಾಳಿಸುವದಿಲ್ಲ. ಹೀಯಾಳಿಸಿ ತನ್ನ ಸೃಷ್ಟಿಯಿಂದಾತನನ್ನು ದೂರ

ತಳ್ಳುವದಿಲ್ಲ. ಮತ್ತೆ ಆಶ್ರಯಿಸಿ ಬಂದರೆ ಆತನ ಎದೆಗೆ ಬೆಳಕೀಯುತ್ತದೆ ಲಿಂಗವಿಶಾಲಾತ್ಮ."

—"ಬೋಧಕರು ದಿಕ್ ಸೂಚಿಯಾದರೆ; ವೇಳಾ ಪತ್ರಿಕೆಯಂತೆ ನಿರ್ಗಮನಿಗಳಾದರೆ; ನಡೆಯದೆ ಮಾರ್ಗಮಾಪನ ಸೂಚಿಸುವ ಮೈಲು ಗಲ್ಲುಗಳಾದರೆ ಏನು ಬೆಲೆ? ದಿಗ್ಗದಿಗಂತ ತಿರುಗಿ ದೇಶಾನುಭವ ಪಡೆಯ ದಿದ್ದರೆ, ನಡೆದು ತೀರ್ಥಕ್ಷೇತ್ರಾದಿಗಳ ದರ್ಶನಗೈಯ್ಯದಿದ್ದರೆ, ನದಿ-ನದ್ಯಾದಿ ಸಾಗರಗಳಲ್ಲಿ ಮೀಯದಿದ್ದರೆ ಲೌಕಿಕ-ಅಲೌಕಿಕಾನುಭವ ತನಗಾಗುವದೆಂತು? ನೈತಿಕ ಕ್ರಮ ತಿಳಿಸಿದರೆ ಸಾಕೆ ನೀತಿಯುಕ್ತನಾಗದೆ? ಧರ್ಮದ ಮರ್ಮ ತಿಳಿಸಿದರೆ ಸಾಕೆ ಧರ್ಮಾತ್ಮನಾಗದೆ? ಲಿಂಗಧಾರಣತ್ವವ ಸೂಚಿಸಿದರೆ ಸಾಕೆ ತಾ ಲಿಂಗಧಾರಿಯಾಗದೆ? ಇಲ್ಲ, ಹಾಗಿಲ್ಲ! ನುಡಿದಂತೆ ನಡೆವ, ನಡೆದಂತೆ ನುಡಿವ ಗತಿ-ಮತಿ ನಮ್ಮ ಬೋಧಕರಿಗೆ ಬರಲಿ!"

—"ಗೋಪುರ ಎರಡಾದರೂ ಗುಡಿ ಒಂದೇ. ಗುರು-ಮೂರ್ತಿ ಗಳೀರ್ವರಾದರೂ ಗುರು ಕೀರ್ತಿ ಒಂದೇ ಒಂದು. ಅದನ್ನೇ ಸಾರುತ್ತಿದೆ ಗುರು ಮಹಾಂತ ವಿಜಯ ಮಹಾಂತ ಗುರುದ್ವಯರ ಗದ್ದುಗೆಯ ಮಂದಿರ."

—"ಜಗದ್ಗುರು ಸಂಬೋಧನೆ ನಮಗೆ ಬೇಡ."

—"ಉಚಿತಾಸನ ಬೇಕೆಂಬ ಹಟ ಸ್ವಭಾವ ಶಿವನು ಯಾವತ್ತೂ ಕರುಣಿಸದಿರಲಿ ನಮಗೆ."

—"ಮಹಾತಪಸ್ವಿ ಹಣದ ಪೆಟ್ಟಿಗೆ ತುಂಬದಿದ್ದರೂ ಚಿಂತಿಲ್ಲ, ಭಕ್ತಿ ಗುಣದ ಪೆಟ್ಟಿಗೆ ತುಂಬಿಸಿದರೆ ಸಾಕು."

—"ಬಸ್ಸು, ಟ್ರೇನು, ಪ್ಲೇನುಗಳು ಕ್ಷೇತ್ರಯಾತ್ರೆ ಮಾಡಿದಂತೆ ಜೀವ ನೀನು ಮಾಡಿದರೇನು ಪ್ರಯೋಜನ? ಕ್ಷೇತ್ರಾರ್ಥಿಯಾಗಿ ಹೋಗು! ಮೋಕ್ಷಾರ್ಥಿಯಾಗಿ ಭವನೀಗು!"

—"ಲಿಂಗವಿಲ್ಲದವರನ್ನು ಭವಿ ಎಂದು ದೂರಿರುವದು ನಮ್ಮಿಂದಾ ಗುವದಿಲ್ಲ. ಅವರ ಹತ್ತಿರ ಹೋಗಿ, ಲಿಂಗ ಮಹತಿ ತಿಳಿಸಿ, ಲಿಂಗಾಂಗಿ ಯನ್ನಾಗಿ ಮಾಡುವಲ್ಲಿ ನಮ್ಮ ಕರ್ತವ್ಯ ಪವಿತ್ರಗೊಳ್ಳುತ್ತದೆ ಎಂದು ನಾವು ಸದಾ ಭಾವಿಸುತ್ತೇವೆ. ಹಾಗೆ ಬಯಸುತ್ತೇವೆ."

"ಸಂಗೀತವೇ ಪಂಚಾಕ್ಷರಿ ಗವಾಯಿಗಳ ಬಾಳಾಗಿತ್ತು. ಅವರ ಆ ಬಾಳಿಗೆ ಪೂರ್ಣ ಚೇತನೀಯ ಶಕ್ತಿ ಹಾನ್ಗಲ ಶಿವಯೋಗಿಯ ಕೃಪೆಯಾಗಿ ನಿಂತಿತ್ತು."

—"ಗುರು—ವಿರಕ್ತರೊಂದೆಂಬ ಗಮತೆ ಸಾರಿದ ಮಹಾಕಾರಣಿಕ ಶಿವಯೋಗಿ ಹಾನ್ಗಲ್ಲ ಗುರು ಕುಮಾರೇಶ್ವರನ ಆದರ್ಶ ನಮ್ಮವರೆಲ್ಲರಿಗೆ ಬರಬೇಕು. ಬಂದಾಗ- ವೀರಶೈವ ಮತ್ತು ಕಳಾ ಪೂರ್ಣ-ವಾಗುವದು."

—"ಸೃಷ್ಟಿಯ ಪ್ರತಿಯೊಂದು ಜೀವಗಳು ಲಿಂಗ ಕೃಪಾತ್ರಗಳು ಅಂತೇ ಸರ್ವಕ್ಕೆಲ್ಲ ಲಿಂಗ ಸಲ್ಲಬೇಕೆಂಬ ಮಣಿಹ ಕೈಕೊಂಡಿದ್ದರು ಶಿವ-ಶರಣರು,"

—"ಅಲ್ಲಮ ಪ್ರಭುದೇವರು ಆಧ್ಯಾತ್ಮದ ಮಹಾ ಶಕ್ತಿ ಎಂದು ವರ್ಣಿಸುವದಕ್ಕಿಂತ—ಆಧ್ಯಾತ್ಮ ಶಕ್ತಿಯೇ ಆ ರೂಪ ತಳೆದಿತ್ತೆಂದರೆ ಸಮಂಜಸವಾದೀತು."

—"ಕವಿ, ಕಲಾವಿದ, ಗಾಯಕ, ಪಂಡಿತರು; ಕೀರ್ತನ, ಪುರಾಣ ಶಿವಾನುಭವ ಪ್ರವಚನಕಾರರು ನಮ್ಮ ಚಿತ್ತರಗಿ ಪೀಠದ ಆಸ್ತಿಗಳು."

—"ವಿಜಯ ಮಹಾಂತನ ಕೀರ್ತಿ ಜ್ಯೋತಿ ವಿಶ್ವಾದ್ಯಂತ ಬೆಳಗುತ್ತಿದೆ ಎಂಬುದಕ್ಕೆ ಸಾಕ್ಷಿ— ಪರರಾಷ್ಟ್ರವಾದ ಸಿಲೋನ (ಸಿಂಹಳ) ರೆಡಿಯೋ ಕೇಂದ್ರದಿಂದ ವಿಜಯ ಮಹಾಂತೇಶ್ವರ ಸುಪ್ರಭಾತ ಪದೆ ಪದೆ ಪ್ರಸಾರವಾಗುತ್ತಲಿರುವದು.

—"ಲಿಂಗನೇಮಿಗಳ ಮನೆಯ ಬಿನ್ನಹ ನಮಗೆ ಬಲು ಆದರ."

—"ಹೊಸದಾದ ಮಣ್ಣುಪಾತ್ರೆಯು ನಮಗೆ ತಂಪು ನೀರು ಕೊಡ ಲೆಂದು ತಾನು ಮೊದಲು ನೀರು ಕುಡಿದು ತಂಪಾಗಿದೆ. ಅದು ತಂಪಾದರೆ ತಾನೆ ನಮಗೆ ತಂಪು ನೀರು ? ಅಂದಮೇಲೆ ಅದರದೇನು ಸ್ವಾರ್ಥ? ಅದರ ನೀರ್ಗುಡಿತದಲ್ಲಿ ಪರಾರ್ಥ ಗುಣವೇ ತುಂಬಿದೆ ಹೊರತು, ಸ್ವಾರ್ಥವಿಲ್ಲ."

—"ಬಿಲ್ವ ಪತ್ತುರಿಯ ಕೊಲ್ಲೆಗಳನ್ನು ಮುರಿದು ತಂದು ಬರಚಿ ಪುಟ್ಟಿಗಟ್ಲೆ ಬಿಲ್ವಪತ್ರಿಗಳನ್ನು ಲಿಂಗಯ್ಯನಿಗೆ ಧರಿಸೋಣದರಿಂದ, ಆ ಬಿಲ್ವ ಗಿಡದ ಆಯುಂಷ್ಯ ಹರಣಗೈದಂತಲ್ಲವೆ ? ಅದು ಲಿಂಗಯ್ಯನಿಗೆ ಖಂಡಿತ

ಪ್ರಿಯಂವಾಗುವದಿಲ್ಲ."

—"ಮುಳ್ಳುಗಳ ಮಧ್ಯದಲ್ಲಿರುವ ಬಿಲ್ವಪತ್ತ್ರಿ ಶಿವನಿಗೆ ಪ್ರಿಯ. ಹಾಗೆ ಅರಿಷಡ್ವರ್ಗಗಳ ಮಧ್ಯದಲ್ಲಿರುವ ಮನ ಬಲು ಪ್ರಿಯ ಶಿವನಿಗೆ. ಮುಳ್ಳುಗಳ ಹೊರತಿರಿಸಿ ಕೇವಲ ಬಿಲ್ವವೊಂದನ್ನು ಆದರದಿಂದೆತ್ತಿ ಧರಿಸಿದರೆ ಅದೆಷ್ಟು ಆನಂದ ಪಡುವನೋ ಲಿಂಗಯ್ಯ.—ಅದಕ್ಕಿಂತಲೂ ಹೆಚ್ಚು ಆನಂದವನ್ನನುಭವಿಸುವನು. ಅರಿಷಡ್ವರ್ಗಗಳ ಜಂಜಡದಿಂದ ಕೇವಲ ಮನವೊಂದನ್ನೇ ಕಿತ್ತಿ ಭಕ್ತಿ ಪತ್ತ್ರಿಯ ಮಾಡಿ ಧರಿಸುವದರಿಂದ."

—"ನಮ್ಮ ಜೀವಪಾತ್ರ ಪವಿತ್ರವಾಗಬೇಕೆಂಬ ಸಂಕಲ್ಪದಿಂದ ಬಿಲ್ವ ವೃಕ್ಷ ತಾನಾಗೇ ನೀಡಿದ ಪತ್ತ್ರಿಯನ್ನು ಧರಿಸಬೇಕು. ವಿಜಯ ಮಹಾಂತ ಶಿವಯೋಗಿಗಳು, ಅಥಣಿ ಮುರುಘೇಂದ್ರ ಶಿವಯೋಗಿಗಳೂ. ಕಲಬುರ್ಗಿ ಶರಣರಾದಿ ನಮ್ಮ ಹಿರಿಯರು—ಪತ್ತ್ರಿಯ ಗಿಡವಡಿಯಲ್ಲಿ ಸಾರಣಿ ಹಾಕಿ ಕೈ ಮುಗಿದು ನಿಲ್ಲುತ್ತಿದ್ದರು. ಆಗ ಗಾಳಿಗೆ ಅಲುಗಿ ನೀಡಿದ ಪತ್ತ್ರಿಗಳ-ನ್ನಷ್ಟೇ ಆರಸಿ ತಂದು ಆನಂದಗೊಂಡು ಲಿಂಗಾರ್ಚನಾನಂದದಲ್ಲಿ ಮೈಮರೆಯುತ್ತಿದ್ದರು. ಹೇಗೆ ಪತ್ತ್ರಿಯ ತರಬೇಕು. ಇಂತು ಧರಿಸಿ ಜೀವಪಾವಿ-ತ್ರತೆಯನ್ನು ಸಾಧಿಸಿಕೊಳ್ಳಬೇಕು.

—"ಅಂಗದ ಆಚಾರದಲ್ಲಿ ಶರೀರದ ಆರೋಗ್ಯ ವೃದ್ಧಿ. ಹಾಗೆ ಲಿಂಗದ ಆಚಾರದಲ್ಲಿ ವಿಚಾರದಲ್ಲಿ ಮನ-ಭಾವ ಬುದ್ಧಿಗಳ ಆರೋಗ್ಯ ವೃದ್ಧಿ."

—"ಮದ-ಮತ್ಸರಾದಿಗಳಿಗೆ ಈ ಮಾತನಾಡದ ಪ್ರಾಣಿಗಳೂ ಬಲಿಯಾಗುತ್ತಲಿವೆಯಲ್ಲಾ... ಎಂದು ಮರಗಿ; ಈ ಪ್ರಾಣಿಗಳು ಕೂಡಾ ಅರಿಷಡ್ವರ್ಗಗಳುಪಟಳಕ್ಕೆ ಬಿದ್ದು ಹಾಳಾಗಬಾರದೆಂದು ನಿರ್ಧರಿಸಿ, ನಾಯಿ-ಬೆಕ್ಕು-ಎತ್ತಾಕಳುಗಳಾದಿ ಪ್ರಾಣಿ-ಪಕ್ಷಿಗಳಿಗೆ ಲಿಂಗ ಕಟ್ಟಿದರು ನಮ್ಮ ಶರಣರು."

—"ಎಲ್ಲ ಸುಪ್ರಭಾತ ಗೀತೆಗಳು ತಮ್ಮಷ್ಟಕ್ಕೆ ತಾವು ಎದ್ದರೆ-ವಿಜಯ ಮಹಾಂತೇಶ್ವರ ಸುಪ್ರಭಾತ- ಜೀವಿಗಳನ್ನು ಎಬ್ಬಿಸುತ್ತದೆ; ಗುರು-ದೇವನ ಸ್ತುತಿ ಮಾಡ ಹಚ್ಚುತ್ತದೆ."

—"ಚಿತ್ತರಗಿಯಲ್ಲಿ ಸದಾವಾಸ ಶ್ರೀ ವಿಜಯ ಮಹಾಂತೇಶ."

—" ಬಸವನ ಕೀರ್ತಿ ಗೌರಿಶಂಕರ. ಅಲ್ಲಮನ ಕೀರ್ತಿ ಹಿಮಾಲಯದ ವಿಸ್ತಾರ."

—" ಲಿಂಗ ಧರಿಸಿ, ಲಿಂಗ ಯಜಿಸಿ, ಲಿಂಗಗುಣ ವಿಜಯಿಯಾದವನೇ ಮಹಾಂತನಾಗುತ್ತಾನೆ. ಅದೇ ವಿಜಯ ಮಹಾಂತ ಸಿದ್ಧಿ. ಈ ಸಿದ್ಧಿ ಜಗಜೀವರಿಗೆ ಬರಬೇಕು."

—" ಚಿತ್ತರಗಿ ಪೀಠಾಧೀಶರೆ ಎಮ್ಮ ಇಷ್ಟಲಿಂಗ. ಚಿತ್ತರಗಿ ಚರ ಪೀಠವೆಮ್ಮ ಪ್ರಾಣಲಿಂಗ. ಚಿತ್ತರಗಿ ಪೀಠದ ಭಕ್ತವೃಂದವೆಮ್ಮ ಭಾವಲಿಂಗ."

—" ಗುರು – ವಿರಕ್ತರ ಒಗ್ಗೂಟಕ್ಕೆ ಶ್ರಮಿಸಿದ ಸಮಾಜ ಪುರುಷ ಹಾನಗಲ್ಲ ಶಿವಯೋಗಿವರೇಣ್ಯರ ವಿಶಾಲ ಮನೋಭೂಮಿಕೆಯ ಅರಿವು ಅದೆಷ್ಟು ಗುರು–ವಿರಕ್ತರ ಒಳಗಕ್ಕಿದೆ."

—" ಸ್ಥಲಭೇದದಲ್ಲಿ, ಸಮಯ ಭೇದದಲ್ಲಿ ಮನಸ್ಸಿಟ್ಟು ತಲೆ ಕೆಡಿಸಿ ಕೊಳ್ಳುವಲ್ಲಿ ಮಠಾಧೀಶ್ವರ ಕರ್ತವ್ಯ–ದಾರಿ ತಪ್ಪಬಾರದು."

—" ಗುರು–ವಿರಕ್ತರ ಎಂಬ ತಾರತಮ್ಯ ಬೆಳೆದು ಬಂದುದು ನಮ್ಮ ವೀರಶೈವ ಧರ್ಮದ್ದೇ ಒಂದು ಕರ್ಮ."

—" ಏಳಬೇಕು; ಎದ್ದು ದೇವ ದರ್ಶನ ಗೈದು: ದೇವನುತಿ ಮಾಡಿ; ಭವ ಜಾಡ್ಯದಿಂದ ದೂರಾಗಿ; ಶಿವನಾಗಬೇಕು ಈ ಜೀವನೆಂಬುಪದೇಶದಲ್ಲಿ ದಿನ ಬೆಳಗು ಕೇಳಿ ಒರುತ್ತಿದೆ ವಿಜಯ ಮಹಾಂತೇಶ್ವರ ಸುಪ್ರಭಾತ."

"—ಸ್ತ್ರೀ ಶಕ್ತಿ ಪುರುಷ ಶಕ್ತಿಗೆ ಕಡಿಮೆ ಇಲ್ಲ ಹೊರತಿಲ್ಲ, ಸರ್ವ ಸಮಾನ– ಸರ್ವ ಮಾನ್ಯ ಎಂಬುದೇ ಆಗಿದೆ ಶಿವನ ಶಕ್ತಿ ವಿಶಿಷ್ಟ ಲೀಲಾ ಸಂಪನ್ನತೆ."

— ಸರ್ವಧರ್ಮ ಸಂಜೀವಿನಿ ಹಾನಗಲ್ಲ ಶಿವಯೋಗಿ ಎಂಬುದಕ್ಕೆ ಸಾಕ್ಷಿ– ಪಂಚಾಕ್ಷರ ಗವಾಯಿಗಳಿಗೆ ಸರ್ವಧರ್ಮದ ಅಂಧ– ಅನಾಥರಿಗೆ ಪುಕ್ಕಟೆಯಾಗಿ ಅನ್ನ ವಸ್ತ್ರಗಳನ್ನಿತ್ತು, ಸಂಗೀತ ವಿದ್ಯೆಯನ್ನು ಕಲಿಸು !' ಎಂದು ಉಪದೇಶಿಸಿ, ಭಾಷೆ ತೆಗೆದುಕೊಂಡೊಪ್ಪಿಸಿ: ಸಮಾಜ ಸೇವೆಗೆ ಹಚ್ಚಿಸಿದ್ದು."

—"ಅವರೇನು ಮಾಡುತ್ತಾರೆ ಎನ್ನುವ ಬುದ್ಧಿವಂತಿಕೆಗಿಂತ— ನಾನೇನು ಮಾಡುತ್ತಲಿದ್ದೇನೆ ಎನ್ನುವ ವೈಚಾರಿಕತೆ ಬರುವದರಲ್ಲಿ ಶ್ರೇಯಸ್ಸಿದೆ,

—"ನಾನು ಬದುಕುವುದು ದೊಡ್ಡ ಮಾತಲ್ಲ, ನನ್ನವರೊಂದಿಗೆ ನನ್ನವರೆಲ್ಲರೂ ಬದುಕಬೇಕೆನ್ನುವದೇ ಶರಣ ಬದುಕಿನ ದಿವ್ಯ ಸಂದೇಶ."

—"ಯಾವ ಸಮಾಜದವನೇ ಇರಲಿ, ಆಶ್ರಯ ಬಯಸಿ ಬಂದವರಿಗೆ ನಿರಾಕರಿಸಲಿಲ್ಲ ಹಾನಗಲ್ಲ ಶಿವಯೋಗಿಗಳು. ಅವರಿಂದ ಉದ್ಧಾರವಾದ ಜನರು ಎಲ್ಲ ಸಮಾಜದಲ್ಲಿ ಇದ್ದಾರೆ."

—"ಸಮಾಜದ ಉದ್ಧಾರಕ್ಕಾಗಿ ಶ್ರಮಿಸಿ ಶ್ರಮಿಸಿ ಹಾನ್ಗಲ್ಲ ಗುರುಕುಮಾರ ಶಿವಯೋಗಿಗಳು; ತಾವು ಬಡವಾಗಿ-ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದರು.''

—"ನಿಜವಾದ ವಿರಕ್ತ ಹಾನ್ಗಲ್ಲಪ್ಪ ಎಂದು ವಿಜಯಮಹಾಂತರು ನುಡಿದರೆ ಜಗದ್‌ಭರಿತಿ ಜಂಗಮ ವಿಜಯ ಮಹಾಂತಪ್ಪ ಎಂದು ಹಾನ್ಗಲ್ಲ ಶಿವಯೋಗಿಗಳು ವಂದಿಸುತ್ತಿದ್ದರು."

—"ವಿಜಯ ಮಹಾಂತರು ಹಾನ್ಗಲ್ಲ ಶಿವಯೋಗಿಗಳು ಇವರೀರ್ವರು ಶಿವಶಕ್ತಿ-ಒಂದಿದ್ದೆರಡಾದ ಕಮಲು; ಎರಡಿದ್ದೊಂದಾದ ಕರುಳು.''

—"ವಿಜಯ ಮಹಾಂತೇಶ ಮಹಾತ್ಮೆ ನಾಟಕ ಪ್ರಯೋಗದಿಂದ ಕನ್ನಡ ರಂಗಭೂಮಿ ಪವಿತ್ರವಾಯಿತು. ಇಂಥ ಮಹಿಮರನೇಕರ ನಾಟಕಗಳು ರಂಗಕ್ಕಾಣಿಯಾಗಿ ಬರಲಿ ! ಅನಾಗರಿಕತೆಯ ವೀಕ್ಷಕ ಬುದ್ಧಿಯಿಂದ ಮೇಲೆದ್ದು ಬರಲಿ ಜನಮನ.''

—"ಲಿಂಗವಿದ್ದವರೆಲ್ಲ ಸಂಗಮನಾಥನೆಂದೆಂಬೆನೆಂದ ಬಸವ ಕೃಪೆಯನ್ನುಂಡು ನಾವು—ಲಿಂಗವಿದ್ದವರೆಲ್ಲರು ಲಿಂಗನಾಥನ ಕೃಪಾವಲಂಬಿಗಳೆಂದೆಂಬೆವು. ಅಂಗ—ಲಿಂಗ ಕೂಡಿದರಿದುವೆ ಕೂಡಲ ಸಂಗಮ; ಲಿಂಗಾಂಗ ಸಮರಸ ಸುಖ ಸಾಮ್ರಾಜ್ಯದ ಚಕ್ರವರ್ತಿಯೇ ನಿಜ ಕೂಡಲ ಸಂಗಮನಾಥನೆಂದು ನೆನೆವೆವು."

—"ಬಸವಣ್ಣ ಜಗಕೆ ಅಣ್ಣ; ಮಹಾದೇವಿ ಜಗಕ್ಕೆ ಅಕ್ಕ. ಅಂಥ

ಅಣ್ಣ–ಅಕ್ಕಂದಿರನ್ನು ಪಡೆದ ನಾವುಗಳೆಲ್ಲ–ಅವರಂತರಾತ್ಮ ಒಪ್ಪುವ ತೆರದಲ್ಲಿ ಬಾಳದಿದ್ದರೆ ನಮಗೇನು ಬೆಲೆ?".

— ಜಂಗವೋ ಜಗದ್‌ಭರಿತ ಎಂಬ ಆರೋಕ್ತಿಗೊಪ್ಪಿತವಾದ ಮಹಾ ವ್ಯಕ್ತಿತ್ವ ಜಂಗಮ ಬಳಗ ಸಂಪಾದಿಸಿಕೊಳ್ಳಬೇಕು."

—"ಮಹಾರಾಷ್ಟ್ರ ಬಂಧುಗಳು ಹಾಗು ಕನ್ನಡಿಗರು ಸೇರಿ ಮುಂಬೈ ನಗರದಲ್ಲಿ ಬಸವ ಜಯಂತಿಯನ್ನು ಬಲು ವಿಜೃಂಭಣೆಯಿಂದ ಆಚರಿಸಿ, ನಮ್ಮನ್ನು ಕರೆಸಿ, ನಮಗೂ ಕೂಡಾ ಬಸವೇಶನ ಸೇವೆ ಕಲ್ಪಿಸಿಕೊಟ್ಟಿದ್ದೀರಿ. ಬಸವ ತಂದೆಯ ಮಹಿಮೆ ಬಲು ದೊಡ್ಡದು— ಕನ್ನಡಿಗರು– ಮರಾಠಿಗರೆಂದು ತಾರತಮ್ಯವ ತೊಲಗಿಸಿ ಒಂದಾಗಿಸಿ-ಕೊಂಡು ಜಯಂತಿಯ ಸೇವೆ ಕೈಕೊಳ್ಳುತ್ತಲಿದೆ."

—"ನಾವೆಲ್ಲ ಬಿಡಿ ಬಿಡಿ ಎಂಬ ತಪ್ಪು ಗ್ರಹಿಕೆಯಿಂದ ಗಡಿ ಸಮಸ್ಯೆ ತಂದು ಬಡಿದಾಡುವ ಭೇದ ಪರಿಸರವು– ಒಂದಿಲ್ಲ ಒಂದು ದಿನ ಇಲ್ಲವಾಗಿ, ನಾವೆಲ್ಲ ಒಂದೇ ಭಾರತೀಯ ಬಂಧುಗಳೆಂಬ ತಿಳಿವಳಿಕೆ ಒದಗಲು ಬಸವ ಸಂದೇಶ ಜಾಗ್ರತಾ ಪರ ಜಯಂತ್ಯಾದಿ ಆಚರಣೆಯಿಂದ."

—"ನಮ್ಮ ಮಹಾರಾಷ್ಟ್ರ ಪ್ರವಾಸದಲ್ಲಿ– ಅನೇಕ ಜನ ಲಿಂಗಾ-ಯತರು ಹಾಗು ಲಿಂಗಾಯತರೇತರ ಜೈನ–ಮರಾಠಾ ಬಂಧುಗಳು ನಮ್ಮಲ್ಲಿಗೆ ಬಂದು– ಬಸವ ಸಂದೇಶ ಪರ ಹಾಗು ಲಿಂಗ ತತ್ವಪರ ನುಡಿಗಳನ್ನು ಕೇಳಿದರು. ಅಷ್ಟೇ ಅಲ್ಲ–ನಮ್ಮಲ್ಲಿ ಆದರಣೀಯರಾಗಿ ಲಿಂಗದೇವರನ್ನು ಸ್ವೀಕರಿಸಿ ಭಕ್ತಿದುಂಬಿ ಮಣಿದರು. ಇದೆಲ್ಲ ಲಿಂಗ ಮೂರ್ತಿ ಶ್ರೀ ಬಸವೇಶನ ದಯೆಯೆಂದು ಲಿಂಗಶಕ್ತಿಗೆ ಕೈಮುಗಿದೆವು."

—"ಅಂತರಂಗದ ಕರುಣೆ, ಭಕ್ತಿ, ಪ್ರೇಮ, ವಾತ್ಸಲ್ಯಗಳೊಟ್ಟಾಗಿ ತಾಯ್ತಂದೆಯರ ತೊಡೆಯ ಮಗುವಿನಂತೆ ಗುರು–ಜಂಗಮರ ನಂಬಿ ಬೆಳೆದು ಬೆಳಕಾಗಬೇಕು ಜೀವನು."

—"ಶರಣರು ಅನೇಕ ದೇವೋಪಾಸನೆ, ಕ್ಷುದ್ರ ದೇವೋಪಾಸನೆ ಗಳನ್ನು ಖಂಡಿಸಿದರು. ಹದಗೆಟ್ಟ ಸಮಾಜದಲ್ಲಿ ಹದ ತುಂಬಿದರು. ಚಾಂಚಲ್ಯ ಭ್ರಾಂತಿಯಿಂದ ಹಲವು ಹನ್ನೊಂದಕ್ಕೆ ತಲೆಬಾಗುವ ಭ್ರಾಮ ಕರಿಗೆ–ಅವರ ಎದೆಯ ಮೇಲೆಯೇ ಇರುವ ಅರುಹಿನ ಕುರುಹಿನ

ಪರಂಜ್ಯೋತಿ ಲಿಂಗ ದರ್ಶನವನ್ನು ಮಾಡಿಸಿ ಆಧ್ಯಾತ್ಮ ಯಾತ್ರೆಯನ್ನು ಸರಳ ಮಾಡಿದರು. ಬಾಳ ಹಸನಗೊಳಿಸಿದರು. ಬದುಕನ್ನು ಶುದ್ಧ ಭಕ್ತಿಯಿಂದ ತುಂಬಿದರು. ಮಾನವತೆಯನ್ನು ದೇವತ್ವದ ನೆಲೆಗೆ ತಂದು ನಿಲ್ಲಿಸಿದರು.''



# ಷಟ್‌ಸ್ಥಲ ಚಕ್ರವರ್ತಿ ಚನ್ನಬಸವೇಶ್ವರ

[ ಬೆಂಗಳೂರು ಬಸವ ಸಮಿತಿಯವರು ದಿ ೨೨-೩-೭೭ ರಂದು ಬಸವಭವನದಲ್ಲಿ ಏರ್ಪಡಿಸಿದ, ವಿಚಾರಗೋಷ್ಠಿಯಲ್ಲಿ ಷಟ್-ಸ್ಥಲ ಚಕ್ರವರ್ತಿ ಚನ್ನಬಸವೇಶ್ವರ" ಈ ವಿಷಯದ ಬಗ್ಗೆ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು ಚಿತ್ರರಗಿ ಸಂಸ್ಥಾನವ.ಠ, ಇಲಕಲ್ಲ ಅವರು ನೀಡಿದ ಉಪನ್ಯಾಸ....................... ]

## ಬಸವಪೂರ್ವಕಾಲೀನ ತತ್ತ್ವ ಪ್ರಜ್ಞೆ :

ಬಸವ ಪೂರ್ವಕಾಲೀನ ಇತಿಹಾಸವನ್ನು ಪರಾಮರ್ಶಿಸಿದರೆ 'ವೀರಶೈವತ್ವಕ್ಕಿಂತ ಶೈವಸಂಸ್ಥೆಗಳ ಪ್ರಾಬಲ್ಯ ಎದ್ದು ಕಾಣುತ್ತದೆ. ಶರಣ ಸಂಸ್ಕೃತಿಯ ಕುರುಹುಗಳಾದ ಷಟ್‌ಸ್ಥಲ ಸಿದ್ಧಾಂತವಾಗಲಿ, ಅಷ್ಟಾ-ವರಣ ಪಂಚಾಚಾರಗಳಾಗಲಿ ಶೈವಧರ್ಮದಲ್ಲಿ ಸಾರ್ವತ್ರಿಕ ಆಚಾರ ಪ್ರಕ್ರಿಯೆಗಳಾಗಿರಲಿಲ್ಲ. ಕಾರಣ, ಶಿವೋಪಾಸನೆಯನ್ನೇ ಗಮ್ಯವಾಗಿರಿಸಿ ಕೊಂಡ ಹಲವಾರು ಪಂಥಗಳು ಕಾಳಾಮುಖ, ಕಾಪಾಲ, ಲಕುಲೀಶ, ಪಾಶುಪತ, ಮಾಹೇಶ್ವರ, ಪ್ರತ್ಯಭಿಜ್ಞಾ, ರಸೇಶ್ವರ. ಮಹಾವ್ರತಧಾರಿ ಮುಂತಾಗಿ ಶಾಖೋಪಶಾಖೆಗಳಾಗಿ ಹಂಚಿಹೋಗಿದ್ದವು. ಅವುಗಳಲ್ಲಿ ಆಚಾರ ವೈಷಮ್ಯ ವಿಚಾರವೈವಿಧ್ಯ ಹಾಗು ತಾತ್ತ್ವಿಕ ದಾರಿದ್ರ್ಯಗಳನ್ನು ನಿಖರವಾಗಿ ಪರಿಗಣಿಸಬಹುದಾಗಿತ್ತು. ಆದ್ದರಿಂದ ಕೆಲ ಪ್ರಾಚೀನ ಪಂಡಿತರು ಇವುಗಳಿಗೆ ವಾಮಪಂಥಗಳೆಂದು ಕರೆದುದರಲ್ಲಿ ಕೆಲಮಟ್ಟಿಗೆ ಸತ್ಯಾಂಶವನ್ನು ಗುರುತಿಸಬಹುದು. ಇಂಥ ಪರಿಸರದಲ್ಲಿ ವೈದಿಕ ಶರಣ ಶಾಕ್ತ ಜೈನಾಚಾರ್ಯರು ತಮ್ಮ ಮತಪ್ರಸಾರಕ್ಕೆ ಶಿವೋಪಾಸಕರ ಕೆಲ ಹೀನಾಚಾರಗಳನ್ನು ಖಂಡಿಸುವದನ್ನೆ ರಾಜಮಾರ್ಗವೆಂದು ಕಂಡಿದ್ದರೆ ಆಶ್ಚರ್ಯವೇನಿಲ್ಲ. ಆದ್ದರಿಂದ ಶೈವ ಸಿದ್ಧಾಂತದ ಸ್ಥಲಕಟ್ಟಿನ ನಿರ್ಣಯದ ದೀಕ್ಷೆ ಕೈಕೊಂಡ ಷಟ್‌ಸ್ಥಲ ವಿಜ್ಞಾನಿ ಚನ್ನಬಸವಣ್ಣ– 'ಶೈವ ಸೈವೆರ ಗಾದ, ಪಾಶುಪತಿ ಪಥವನರಿಯ, ಕಾಳಾಮುಖಿ ಕಂಗೆಟ್ಟ, ಮಹಾವ್ರತಿ ಮದವೇರಿದ, ಸನ್ಯಾಸಿ ಪಾಷಂಡಿಯಾದ, ಕಾಪಾಲಿ ಮರುಳಾಗಿ ತಿರುಗಿದ,

ಈ ಆರು ಭಕ್ತಿ ಪಥಕ್ಕೆ ಸಲ್ಲವು ಕೇಳಿರಣ್ಣಾ" ಎಂದು ತಳ್ಳಿ ಹಾಕಿ ಸಮಗ್ರ ವೀರಶೈವಾಚಾರವನ್ನು ಬಸವಕ್ರಾಂತಿಯ ಮಿಂಚಿನ ಕಣದಲ್ಲಿ ಕಟ್ಟುನಿಟ್ಟಾದ ಷಟ್‌ಸ್ಥಲ ಸಿದ್ಧಾಂತದ ರಕ್ಷೆಯಲ್ಲಿ ಪರಿಷ್ಕರಿಸಿದ. ಅಂತೆಯೇ ಷಟ್‌ಸ್ಥಲ ಚಕ್ರವರ್ತಿ ಚನ್ನಬಸವೇಶ್ವರನಾದ. ಸ್ವತಃ ಬಸವಣ್ಣನವರು– "ಷಟ್‌ಸ್ಥಲದಮೂರ್ತಿಯಾಗಿ ಬಂದೆಯಲ್ಲಾ ಚನ್ನ–ಬಸವಣ್ಣಾ," ಎಂದು ಉದ್ಗಾರ ತೆಗೆದಿದ್ದಾರೆ. ಮರುಳ ಶಂಕರದೇವರು "ಷಟ್‌ಸ್ಥಲ ಬ್ರಹ್ಮ" ಎಂದೇ ಚನ್ನಬಸವಣ್ಣನನ್ನು ಸಂಬೋಧಿಸಿ–ದ್ದಾರೆ.

**ಷಟ್‌ಸ್ಥಲ ಸಿದ್ಧಾಂತದ ಪರಿಷ್ಕರಣ–**
**ಪುರಸ್ಕಾರ – ಪುನರ್ನವೀಕರಣ :**

ವೀರಶೈವ ಪಾರಿಭಾಷಿಕ ಪದಪ್ರಯೋಗಗಳನ್ನೂ ಷಟ್‌ಸ್ಥಲ ಜಿಜ್ಞಾಸೆಯನ್ನೂ ನಾವು ಬಹು ಪುರಾತನವಾದ ಆಗಮಗಳಲ್ಲಿಯೇ ಕಾಣುತ್ತೇವೆ. ವಾತುಲ, ಕಾಮಿಕ, ವೀರ, ಸೂಕ್ಷ್ಮ, ಕಿರಣ, ಮತಂಗ, ಪಾರಮೇಶ್ವರ ಮುಂತಾದ ಆಗಮಂಗಳಲ್ಲಿ ಷಟ್‌ಸ್ಥಲ ಸಿದ್ಧಾಂತದ ಪೂರ್ವೇತಿಹಾಸದ ಹೆಜ್ಜೆಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಪಾರ-ಮೇಶ್ವರ ಆಗಮದಲ್ಲಿ ಪರಮಾತ್ಮ ಸ್ವರೂಪವೇ ಷಟ್‌ಸ್ಥಲವೆಂದು– "ಅಹಮೇವ ಜಗತ್ ಸೃಷ್ಟ್ವಾ ಪುನರ್ಮಯ್ಯೇವಲೀಯತೆ *ಅಹಮೇವ ಸ್ಥಲಂ ವಿದ್ಧಿ ಷಡ್ವಿಧಂ ಮಮರೂಪಕಂ" ಎಂದು ಅಭಿವ್ಯಕ್ತಿ ಉಂಟು, ಪಾರಮೇಶ್ವರ ಆಗಮವು–ಅನಾದಿಶೈವ, ಆದಿಶೈವ; ಅನುಶೈವ, ಮಹಾ ಶೈವ, ಯೋಗಶೈವ, ಜ್ಞಾನಶೈವ ಹಾಗು ವೀರಶೈವ ಎಂದು ಸಪ್ತಶೈವ ಪ್ರಭೇದಗಳನ್ನು ತಾತ್ವಿಕವಾಗಿ ಗುರುತಿಸಿ ವೀರಶೈವರ ಬಗ್ಗೆ ಹೇಳುವಾಗ– "ವೀರಶೈವ ಮತಸ್ಥಸ್ಯ ಜ್ಞಾನಯೋಗೋ ಹಿ ಸಾಧನಂ" ಎಂದಿದೆ. ಇಲ್ಲಿ ಜ್ಞಾನಯೋಗವೇ ವೀರಶೈವ ಧರ್ಮದ ಹೆಗ್ಗುರಿ, ಎಂಬ ಭಾವವಿದೆ. ಆದರೆ ೧೨ನೆಯ ಶತಮಾನದಲ್ಲಿ ಚನ್ನಬಸವಣ್ಣನವರು ಜ್ಞಾನಮಾತ್ರದಿಂದಲೇ ವೀರಶೈವತ್ವ ಸಿದ್ಧಿಯನ್ನು ಅಲ್ಲಗಳೆದರು. ಕ್ರಿಯಾ ಜ್ಞಾನ ಸಾಮರಸ್ಯ ದಲ್ಲಿಯೇ ಅನುಭಾವದ ಅರುಹಿನ ಬುತ್ತಿಯನ್ನು ಕಟ್ಟಿಕೊಟ್ಟರು.

ಉದಾಹರಣೆ:

" ಕ್ರಿಯೆ ಜಡವೆಂಬರು; ಜ್ಞಾನ ಅಜಡವೆಂಬರು,
ಅದೆಂತಯ್ಯಾ?
ನೀತಿಯು ಹೇಳಿದುದು ಜಡವೇ ?
ಕಷ್ಟವಿಲ್ಲದೆ ಬಂದಂತೆ ಬೊಗಳಿ, ಭೋಗಿಸಿ
ಭವಕ್ಕೆ ಹೋಗುವದು ಅಜಡವೇ ?
ಕ್ರಿಯಾಜ್ಞಾನವೆಂಬ ಉಭಯ ಶಬ್ದಾರ್ಥವನರಿಯದೆ
ಕಂಡ ಕಂಡ ಹಾಗೆ ಬೊಗಳುವ ಹೊಲೆಮಾದಿಗರನು ಏನೆಂಬೆ
ಕೂಡಲಚನ್ನಸಂಗಮದೇವಾ:

" ಕ್ರಿಯೆಯಿಲ್ಲದ ಭಕ್ತ ಮನುಜ,
ಕ್ರಿಯೆಯಿಲ್ಲದ ಜಂಗಮ ರಾಕ್ಷಸ,
ಕ್ರಿಯೆಯಿಲ್ಲದ ಪ್ರಸಾದಿ ಯವನ,
ಕ್ರಿಯೆಯಿಲ್ಲದ ಪ್ರಾಣಲಿಂಗಿ ಭವಿ,
ಕ್ರಿಯೆಯಿಲ್ಲದ ಶರಣ ಅಜ್ಞಾನಿ,
ಕ್ರಿಯೆಯಿಲ್ಲದ ಲಿಂಗೈಕ್ಯ ಜನನಕ್ಕೊಳಗು ನೋಡಾ
ಕೂಡಲ ಚನ್ನಸಂಗಮದೇವಾ "

ಇಂಥ ವಚನಗಳಲ್ಲಿ ಆಗಮ ವಿಚಾರಗಳಿಗೂ ೧೨ನೇ ಶತಮಾನದ ವಿಚಾರಗಳಿಗೂ ಸೂಕ್ಷ್ಮವಾಗಿ ಹೋಲಿಸಿ ನೋಡಿದಾಗ ಯುಗ ಯುಗಾಂತರಗಳಿಂದ ಷಟ್‌ಸ್ಥಲ ಸಿದ್ಧಾಂತವು ಅನೇಕ ಪರಿಷ್ಕಾರಗಳನ್ನು ಪಡೆಯುತ್ತಲೇ ಬಂದಿತೆಂದು ತೋರುತ್ತದೆ. ಈ ಪರಿಷ್ಕಾರಗಳಿಗೆ ಪುರಸ್ಕಾರಗಳೂ ದೊರೆಯಬೇಕಷ್ಟೆ; ಅದು ದೊರೆತದ್ದು ೧೨ನೆಯ ಶತಮಾನದ ಅನುಭವ ಮಂಟಪದ ತತ್ತ್ವಜ್ಞಾನದ ಪ್ರಯೋಗ ಶಾಲೆಯಲ್ಲಿ. ಇಲ್ಲಿಯ ಪ್ರಯೋಗ ವಿಜ್ಞಾನಿಗಳಲ್ಲಿ ಸೈದ್ಧಾಂತಿಕ ಸಿದ್ಧಿಯನ್ನು ಪ್ರಸಿದ್ಧಪಡಿಸಿದವನು ಚನ್ನಬಸವಣ್ಣ. ಶರಣರ ನಿತ್ಯ ನೂತನವಾದ ಪ್ರಾಯೋಗಿಕ ಚರ್ಚೆಗಳಲ್ಲಿಯೂ ಷಟ್‌ಸ್ಥಲ ಸಿದ್ಧಾಂತದ ಪರಿಷ್ಕಾರಗಳೂ ಪುನರ್ನವೀಕರಣಗಳೂ ನಡೆಯುತ್ತಿದ್ದವೆಂಬುದಕ್ಕೆ ಕೆಳಗಿನ ವಚನಗಳಂ ಸಾಕ್ಷಿಯಾಗಿವೆ ಉದಾಹರಣೆಗೆ ಷಟ್‌ಸ್ಥಲವನ್ನು ಕುರಿತು ಬಸವಣ್ಣನವರ ವಚನ ನಿರ್ವಚನವನ್ನು ಕಾಣಬಹುದು.

"ಮೆಲ್ಲ ಮೆಲ್ಲನೆ ಭಕ್ತನಪ್ಪೆ
ಮೆಲ್ಲ ಮೆಲ್ಲನೆ ಪ್ರಸಾದಿಯುಪ್ಪೆ
ಮೆಲ್ಲ ಮೆಲ್ಲನೆ ಪ್ರಾಣಲಿಂಗಿಯಪ್ಪೆ
ಮೆಲ್ಲ ಮೆಲ್ಲನೆ ಶರಣನಪ್ಪೆ
ಮೆಲ್ಲ ಮೆಲ್ಲನೆ ಐಕ್ಯನಪ್ಪೆ..."

ಚನ್ನಬಸವಣ್ಣನವರು ಬಸವಣ್ಣನವರ ಷಟ್‌ಸ್ಥಲದ ಸಿದ್ಧಾಂತ ವಾದದ ಈ ಕ್ರಮ ಸಮುಚ್ಚಯ ವಾದವನ್ನೇ ಖಂಡಿಸಿ, ತಮ್ಮ ಸಮ ಸಮುಚ್ಚಯ ವಾದವನ್ನು ಪ್ರತಿಷ್ಠಾಪಿಸಿ ಹೀಗೆ ಹೇಳುತ್ತಾರೆ,

"ಮೆಲ್ಲ ಮೆಲ್ಲನೆ ಭಕ್ತ, ಮೆಲ್ಲ ಮೆಲ್ಲನೆ ಮಾಹೇಶ್ವರ,
ಮೆಲ್ಲ ಮೆಲ್ಲನೆ ಶರಣ ಮೆಲ್ಲ ಮೆಲ್ಲನೆ—
ಐಕ್ಯರಾದೆವೆಂಬರು ನಿಮ್ಮ ಶರಣರು;
ತಾವೇನು ಮರುಜೀವಣಿಯ ಕೊಂಡರೆ ?
ಅಮೃತ ಸೇವನೆಯ ಮಾಡಿದರೆ ?
ಆವಸ್ಥಲದಲ್ಲಿ ನಿಂದರೂ, ಆ ಸ್ಥಲದಲ್ಲಿ ಷಟ್‌ಸ್ಥಲವಡಗದಿರ್ದಡೆ,
ಆ ಭಕ್ತನ ಬಾಯಲ್ಲಿ ಹುಡಿಮಣ್ಣು ಹೊಯ್ದು ಹೋಗನೆ..."

ಇಂಥ ಸೈದ್ಧಾಂತಿಕ ಚರ್ಚೆಗಳನ್ನು ಗಮನಿಸಿದರೆ ವೀರಶೈವ ಸಿದ್ಧಾಂತವು ನಿಂತ ನೀರಾಗದೆ ನಿರಂತರವೂ ನಿತ್ಯ ನೂತನವಾಗಿ ಪರಿಷ್ಕಾರ ದತ್ತ ಪ್ರವಹಿಸುತ್ತಿರುವ ಉತ್ಕ್ರಾಂತಿ ಧರ್ಮವೆಂಬುದು ಸ್ಪಷ್ಟ. ಶರಣರು ಪ್ರಯೋಗಶೀಲ ಸ್ವಭಾವದವರು. ಅವರು ಪರಂಪರೆಯ ದಾಸರಲ್ಲ. ಸಮಗ್ರ ವೀರಶೈವೇತಿಹಾಸದಲ್ಲಿಯೇ ಷಟ್‌ಸ್ಥಲ ವಿಚಾರದಲ್ಲಿ ಸಿಂಹ ಪಾಲು ಸಿಕ್ಕದ್ದು ಚನ್ನಬಸವಣ್ಣನಿಗೆ. ಅಂತೆಯೇ ಆತ ಷಟ್‌ಸ್ಥಲ ಚಕ್ರವರ್ತಿ,

**ಷಟ್‌ಸ್ಥಲ ಪರಾಮರ್ಶೆ :**

ಷಟ್‌ಸ್ಥಲ ದರ್ಶನವು ಭಾರತೀಯ ದರ್ಶನಶಾಸ್ತ್ರದ ಶಿಖರವೆಂದೇ ಪ್ರಾಜ್ಞರ ಅಭಿಪ್ರಾಯ. ಕರ್ಮಯೋಗ, ಜ್ಞಾನಯೋಗ. ಭಕ್ತಿಯೋಗ ಗಳ ಸುಂದರ ಸಾಮರಸ್ಯವೇ ಶಿವಯೋಗದ ಜೀವಾಳ ದೃಷ್ಟಿಯೋಗ, ಹಠಯೋಗ, ರಾಜಯೋಗ, ಲಯಯೋಗಗಳನ್ನೂ ಆತ್ಮೀಕರಿಸಿ

ಕೊಂಡುದು ಶಿವಯೋಗ ಕಾರಣ ಶಿವಯೋಗವು ನಿಂತದ್ದು ಷಟ್‌ಸ್ಥಲ ಸಿದ್ಧಾಂತದ ಭದ್ರ ಬುನಾದಿಯ ಮೇಲೆ. ಇದೊಂದು ಪೂರ್ಣ ಯೋಗ. ಆಧುನಿಕ ಮಾನಸಶಾಸ್ತ್ರದ ಸೂಕ್ಷ್ಮಾತಿ ಸೂಕ್ಷ್ಮ ಪ್ರಭೇದಗಳೂ ಅವಸ್ಥಾಂತರಗಳೂ ಷಟ್‌ಸ್ಥಲಗಳ ಪ್ರಭೇದಗಳಲ್ಲಿ ವೈಜ್ಞಾನಿಕವಾಗಿ ನಿಷ್ಕರ್ಷಗೆ ಬಂದಿವೆ. ಷಟ್‌ಸ್ಥಲ ಬ್ರಹ್ಮಿಯಾದವನು ಪೂರ್ಣಯೋಗಿಯೇ ಸರಿ. ಶರಣನು ಈ ಸ್ಥಲಾಚಾರಗಳಲ್ಲಿ ಹಂತ ಹಂತಗಳಲ್ಲಿ ನೆಲೆನಿಂತ ಮಹಿಮಾ ಪುರುಷ. ಮಾನಸಶಾಸ್ತ್ರದ ಪ್ರಕಾರ ಒಂದು ಗುಣಕ್ಕೆ ನೂರಾರು ಗುಣಗಳ ಸಂಸ್ಕಾರಗಳಿರುತ್ತವೆ. ಅಲ್ಲಿ ಭಾವದ ಸ್ಥಾಯಿಗಿಂತಲೂ ಭವಾಂತರಗಳ ಸಂಚಾರಿಗೆ ಹೆಚ್ಚು ಪ್ರಾಧಾನ್ಯ ಹಾಗೆಯೆ ಭಕ್ತ–ಮಹೇಶ–ಪ್ರಸಾದಿ–ಪ್ರಾಣಲಿಂಗಿ ಶರಣ–ಐಕ್ಯ ಇವುಗಳು ಕೇವಲ ನಿಚ್ಚಣಿಕೆಯ ಮೆಟ್ಟಿಲುಗಳಲ್ಲಿ ಭಕ್ತನಾದವನು ಐಕ್ಯನೂ ಆಗಬಲ್ಲ, ಐಕ್ಯನೂ ಭಕ್ತನಾಗಬಲ್ಲ. ಒಂದೊಂದು ಸ್ಥಲದಲ್ಲೂ ಸರ್ವಸ್ಥಲಗಳ ಪ್ರಸನ ಬೆಳವಣಿಗೆಗೆ ಪೂರ್ಣ ಅವಕಾಶ ಉಂಟು. ಷಟ್‌ಸ್ಥಲವು ನಿರ್ಜೀವ ಬೊಂಬೆಗಳ ಮಾಲೆಯಲ್ಲ; ಸಜೀವ ಶಕ್ತಿಗಳ ಕ್ರಿಯಾಶೀಲ ಕಲಾಸೌಂದರ್ಯ ಇದೊಂದು ತತ್ತ್ವಜ್ಞಾನ ಮಾತ್ರವಲ್ಲ, ಜೀವನ ಕಲೆ; ಕೈವಲ್ಯ ಕಲೆ.

ಚನ್ನಬಸವಣ್ಣ ಷಟ್‌ಸ್ಥಲಾನುಭವವನ್ನು ಹೀಗೆ ಪ್ರಶಂಸಿಸುತ್ತಾನೆ:

"...ಷಟ್‌ಸ್ಥಲ ಬ್ರಹ್ಮವನರಿದಾತನೇ ಶರಣ" ಆತನೇ ಲಿಂಗೈಕ್ಯ;
ಷಟ್‌ಸ್ಥಲ ಬ್ರಹ್ಮವೆಂಬುದು ಅಪ್ರಮಾಣ ಅಗೋಚರ
ಅನಿರ್ವಾಚವಾದಕಾರಣ
ವಚಿಸುತ್ತ ವಚಿಸುತ್ತ ವಚಿಸುತ್ತ ವಚನಗೆಟ್ಟಿತ್ತು:
ಉಪ್ಪುನೀರೊಳು ಕೂಡಿದಂತೆ ವಾರಿಕಲ್ಲು ಅಂಬುಧಿಯೊಳ ಬಿಡದಂತೆ,
ಶಿಖಿಕರ್ಪೂರ ಯೋಗದಂತೆ ಆದನಯ್ಯ ಕೂಡಲಚನ್ನ ಸಂಗಯ್ಯನಲ್ಲಿ,

ಈ ವಚನದಲ್ಲಿ "ಷಟ್‌ಸ್ಥಲ ಬ್ರಹ್ಮನರಿದಾತನೇ ಶರಣ" ಎಂಬ ಘೋಷಣೆ ಇದೆ. ಈ ಷಟ್‌ಸ್ಥಲ ವಿಜ್ಞಾನ ನಿತ್ಯಜೀವನ ವಿವೇಕದಿಂದ ದೂರವಿಲ್ಲ. ಜೀವನ ನೀತಿಯೇ ಇನ್ನೊಂದು ಅರ್ಥದಲ್ಲಿ ಷಟ್‌ಸ್ಥಲ ಸುನೀತಿ. ಅದನ್ನು ಚನ್ನಬಸವಣ್ಣ ಸ್ಪಷ್ಟವಾಗಿ ಪ್ರತಿಪಾದಿಸುತ್ತಾನೆ.

" ಹುಸಿಯುಳ್ಳವ ಭಕ್ತನಲ್ಲ, ವಿಷಯವುಳ್ಳವ ಮಾಹೇಶ್ವರನಲ್ಲ,
ಆಸೆಯುಳ್ಳವ ಮಾಹೇಶ್ವರನಲ್ಲ, ಜೀವಗುಣವುಳ್ಳವ ಪ್ರಾಣಲಿಂಗಿಯಲ್ಲ;

ತನುಗುಣವುಳ್ಳವ ಶರಣನಲ್ಲ, ಜನನ ಮರಣವುಳ್ಳವ ಐಕ್ಯನಲ್ಲ,
ಈ ಆರರ ಅರಿವಿನ ಅರ್ಕದ ಸಂಪತ್ತಿನ ಭೋರಿಗ ಹಿಂಗಿದೆಡೆ,
ಸ್ವಯಂ ಜಾತನೆಂಜೆ.
ಆ ದೇಹ ನಿಜದೇಹವೆಂಜೆ, ಆ ದೇಹ ಗುರುಗುಹೇಶ್ವರನೆಂಜೆ,
ಆ ದೇಹ ಇರಿದಡೆ ಅರಿಯದು, ತರಿದಡೆ ಅರಿಯದು,
ಹೊಯ್ದಡೆ ಅರಿಯದು, ಬಯ್ದಡೆ ಅರಿಯದು,
ಸ್ತುತಿಸಿದಡೆ ಅರಿಯದು, ನಿಂದಿಸಿದಡೆ ಅರಿಯದು,
ಪುಣ್ಯವನರಿಯದು, ಪಾಪನರಿಯದು.
ಸುಖವನರಿಯದು, ದುಃಖವನರಿಯದು,
ಕಾಲವನರಿಯದು, ಕರ್ಮವನರಿಯದು.
ಜನನವನರಿಯದು, ಮರಣವನರಿಯದು.
ಇತೀ ಷಟ್‌ಸ್ಥಲದೊಳಗೆ ತಾ ಒಂದು ನಿಜವಿಲ್ಲವಾಗಿ,
ನಾವು ಹಿರಿಯರು ನಾವು ಗುರುಗಳು,
ನಾವು ಸಕಲ ಶಾಸ್ತ್ರ ಸಂಪನ್ನರು, ಷಟ್‌ಸ್ಥಲ ವಿಜ್ಞಾನಿಗಳು ಎಂಬ
ಮೂಕುರೆಯರ ಮೆಚ್ಚುವನೆ ಕೂಡಲ ಚೆನ್ನಸಂಗಮದೇವ"

ಅಂದರೆ ಸಹಜ ಶಿವಯೋಗಿಯಾದ ಷಟ್‌ಸ್ಥಲಾಚಾರ ಬ್ರಹ್ಮಿಗೆ ಸ್ಥಿತಪ್ರಜ್ಞಾವಸ್ಥೆ ತಾನೆತಾನಾಗಿ ಬರುತ್ತದೆ. ಭಗವಂತನಲ್ಲಿ ವಿಶ್ವಾಸವಿರಿಸುವದೇ ಭಕ್ತಸ್ಥಲದ ಪ್ರತಿಯಾದಾಗ ಹುಸಿನುಸಿಗಳನ್ನು ಆಧರಿಸಿದರೆ ಸ್ಥಲಾಚಾರಕ್ಕೆ ಹೊರಗಾಗುತ್ತೇವೆ. ವಿಷಯ ಸುಖ–ಗಳಿಂದ ನಿರ್ಗಮಿಸುವದೇ ಮಹೇಶನ ಲಕ್ಷಣ. ಆದರೆ ವಿಷಯಾಸಕ್ತನಾದರೆ ಮಹೇಶಸ್ಥಲ ಅಳವಡದು, ಆದರಂತೆ ಪ್ರಸಾದಿಗೆ ಆಶೆಸಲ್ಲದು. ಜೀವಗುಣ ಮೀರಿದವನೇ ಪ್ರಾಣಲಿಂಗಿ. ಜೀವಾತ್ಮನು ಪರಮಾತ್ಮನಾಗುವ ಪ್ರತ್ಯಕ್ಷ್ಯ ಲಕ್ಷಣಕ್ಕೆ ಪ್ರಾಣಲಿಂಗಿಯು ಸಾಕ್ಷಿಯಾಗುತ್ತಾನೆ. ತನುಗುಣಮೀರಿ ಶಿವಗುಣದಲ್ಲಿ ನಿಂತವನೇ ಶರಣ. ಇಲ್ಲಿ ಮಾನವ ಶಿವನಾಗುತ್ತಾನೆ. ಆಗ ಅವನಿಗೆ ದೈವೀ ಜೀವನ (Divine Life) ಅಳವಡುತ್ತದೆ. ಹೀಗೆ ಶಿವತತ್ತ್ವ ಬಂದಾಗ, ಜನನ–ಮರಣಗಳುಂಟು ನಶಿಸುತ್ತದೆ, ಅದೇ ಐಕ್ಯಸ್ಥಲ. ಇದೇ ಪೂರ್ಣಯೋಗದ ವಿಕಾಸಯಾತ್ರೆಯಾಗಿದೆ.

ಈ ಸ್ಥಲಾಚಾರದ ನೀತಿಸೂಕ್ತಿಗೆ ಚನ್ನಬಸವಣ್ಣನ ಇನ್ನೊಂದು ವಚನ ಕನ್ನಡಿ ಹಿಡಿದು ನಿಂತಿದೆ:

"ಭಕ್ತನಾದಡೆ ತನುಮನ್ಸದ ಮೇಲಣಾಸೆಯಳಿದುಳಿದಿರಬೇಕು
ಮಹೇಶ್ವರನಾದೆಡೆ ಪರಧನ ಪರಸತಿಯಾಸೆಯುಳಿದಿರಬೇಕು
ಪ್ರಸಾದಿಯಾದೊಡೆ ಪ್ರಸಾದವಕೊಂಡಕಾಯ ಅಳಿಯದುಳಿದಿರಬೇಕು
ಪ್ರಾಣಲಿಂಗಿಯಾದೊಡೆ ಸುಖ ದು:ಖಾದಿಗಳೆಲ್ಲ ಮರೆದು,
ಪ್ರಾಣಲಿಂಗದಲ್ಲಿ ಸುಸ್ಥಿರನಾಗಬೇಕು
ಶರಣನಾದೊಡೆ ಸತಿಪತಿ ಭಾವವಳಿದುಳಿದಿರಬೇಕು
ಐಕ್ಯನಾದಡೆ ಬಯಲು ಬಯಲಾಗಿರಬೇಕು
ಕೂಡಲ ಚನ್ನ ಸಂಗಮದೇವರಲ್ಲಿ ಈ ಷಟ್‌ಸ್ಥಲದ ನಿರ್ಣಯ
ಸಾಧಕರಿಗಳವೆ ಪೂರ್ವ ಸಂಸ್ಕಾರದ ಸಹಜರೊಡೆಯರಿಗಲ್ಲದೆ?"

ಇಂಥ ಷಟ್‌ಸ್ಥಲ ಬ್ರಹ್ಮೆಯನ್ನು ಯಾವ ಸ್ಥಲದಿಂದ ಬಣ್ಣಿಸಿದರೂ ಪೂರ್ಣವೇ. ಅಂದರೆ ಭಕ್ತಸ್ಥಲದಿಂದ ಐಕ್ಯಸ್ಥಲದ ವರೆಗೆ ಎಲ್ಲ ಸ್ಥಲಗಳೂ ಸ್ವಯಂಪೂರ್ಣವೇ ಆಗಿವೆ. ಅವು ಆಂಶಿಕ-ವಾಗಿಯೂ ಪೂರ್ಣ. ಸಮಗ್ರವಾಗಿಯೂ ಪೂರ್ಣ ಅಂತಸಿಯೆ "...ಪ್ರಸಾದವ ಲಿಂಗಕ್ಕೆ ನೈವೇದ್ಯವ ಸಮರ್ಪಿಸಿ ಭೋಗಿಸುವಾತನೇ ಸದ್ಭಕ್ತ; ಆತನೇ ಮಾಹೇಶ್ವರ ಆತನೇ ಪ್ರಸಾದಿ; ಆತನೇ ಪ್ರಾಣಲಿಂಗಿ, ಆತನೇ ಶರಣ" ಆತನೇ ಐಕ್ಯನು. ಇಂತಪ್ಪ ಷಟ್‌ಸ್ಥಲ ಬ್ರಹ್ಮಿಗೆ ನಮೋ ನಮೋ ಎಂಬೆ "ಎಂದು ಚನ್ನಬಸವಣ್ಣ ಹಾಡಿದ್ದಾನೆ. ಎಂದರೆ ಯಾವ ಸ್ಥಲದಲ್ಲಿ ನಿಂತು ನೋಡಿದರೂ ಆತ ಎಲ್ಲ ಸ್ಥಲಗಳ ಕಲೆಯುಲ್ಲಿ ಕುಂಚವಾಡಿಸಿ ಬಣ್ಣ ತುಂಬಿದ್ದಾನೆ, ಷಟ್‌ಸ್ಥಲ ಸಿದ್ಧಾಂತವು ಆಧ್ಯಾತ್ಮ ಶಾಸ್ತ್ರದ ಪೂರ್ಣವಿಕಾಸ ಯಾತ್ರೆ, ಕಲಾಪೂರ್ಣ, ಪರಿಪೂರ್ಣ ಯೋಗ-ಶಾಸ್ತ್ರ; ಇಂಥ ಶರಣನು ಸರ್ವಾಂಗ ಪ್ರಸಾದಿ—

ಜಿಹ್ವೆ ಗುರು, ಕಂಗಳು ಲಿಂಗ,
ನಾಸಿಕ ವಾಚಾರ, ಶ್ರೋತ್ರ ಪ್ರಸಾದ,
ಹಸ್ತ ಜಂಗಮ, ಭಾವ ಮಹಾಲಿಂಗ,
ಕೂಡಲ ಚನ್ನಸಂಗಯ್ಯಾ ನಿಮ್ಮ ಶರಣ ಸರ್ವಾಂಗ ಪ್ರಸಾದಿ;

## ಕ್ರಿಯಾ ಜ್ಞಾನ ಸಾಮರಸ್ಯ:

ಈ ಸ್ಥಲ ಕಟ್ಟಿಗೆ ಆಚಾರದ ಕಟ್ಟು ತೋರಿಸಿದ್ದಾನೆ ಚನ್ನ-ಬಸವಣ್ಣ. ಅಂದರೆ ಷಟ್‌ಸ್ಥಲವೂ ಕೇವಲ ಜ್ಞಾನ ಪ್ರಧಾನವಲ್ಲ,

ಕೇವಲ ಕ್ರಿಯಾಪ್ರಧಾನವೂ ಅಲ್ಲ; ಅದು ಕ್ರಿಯಾಜ್ಞಾನಗಳ ಸಾಮರಸ್ಯ-ವುಳ್ಳ ಅನುಭಾವ ಪ್ರಧಾನ ಸಿದ್ಧಾಂತ. ಅದರ ಆಚಾರ ಶುದ್ಧಿಯ ಅಗ್ಗಳಿಕೆಯನ್ನು ಬಿಚ್ಚಿ ಹೇಳಿದ ವಚನವೊಂದನ್ನು ಇಲ್ಲಿ ಕಾಣಬಹುದು :

"ಭಕ್ತರಲ್ಲಿ ಬಣ್ಣವನರಸುವಾತನೆ ಆಚಾರದ್ರೋಹಿ
ಜಂಗಮರಲ್ಲಿ ಜಾತಿಯನರಸುವಾತನೆ ಗುರುದ್ರೋಹಿ
ಪಾದೋದಕದಲ್ಲಿ ಸೂತಕವ ಹಿಡಿವಾತನೆ ಲಿಂಗದ್ರೋಹಿ
ಪ್ರಸಾದದಲ್ಲಿ ರುಚಿಯನರಸುವಾತನೆ ಜಂಗಮದ್ರೋಹಿ;
ಇಂತೀ ಚತುರ್ವಿಧದೊಳಗೆ ಸನ್ನಿಹಿತನಾದಾತನೆ ಭಕ್ತ
ಇಂತೀ ಚತುರ್ವಿಧದೊಳಗೆ ಕಲಿಯಾದಾತನೆ ಮಾಹೇಶ್ವರ
ಇಂತೀ ಚತುರ್ವಿಧದೊಳಗೇ ಅವಧಾನಿಯಾದಾತನೆ ಪ್ರಸಾದಿ
ಇಂತೀ ಚತುರ್ವಿಧದೊಳಗೆ ತದ್ಗತನಾದವನೆ ಪ್ರಾಣಲಿಂಗಿ
ಇಂತೀ ಚತುರ್ವಿಧದೊಳಗೆ ಲವಲವಿಕೆಯುಳ್ಳಾತನೆ ಶರಣ
ಇಂತೀ ಚತುರ್ವಿಧದೊಳಗೆ ಅಡಗಿದಾತನೆ ಐಕ್ಯ;
ಇಂತೀ ಷಟ್‌ಸ್ಥಲವು ಸಾಧ್ಯವಾದಾತಾನೆ ಲಿಂಗದೇಹಿ
ಆತ ನಡೆಯಿತ್ತೆ ಬಟ್ಟೆ, ಆತ ನುಡಿಯಿತ್ತೆ ಸಿದ್ಧಿ
ಕೂಡಲ ಚೆನ್ನಸಂಗನಲ್ಲಿ ಆತನೆ ಸರ್ವಾಂಗಲಿಂಗಿ
ಆತನೆ ನಿರ್ದೇಹಿ"

ಈ ಸ್ಥಲಾಚರಣೆಯು ಹಿಗ್ಗುತ್ತ ಹೋಗುವ ಹೊಳೆಯಂತೆ, ಲಿಂಗ ದೀಕ್ಷೆಯಿಂದತ್ತತ್ತ ಪರಿಪೂರ್ಣತೆಯ ಕಡೆಗೆ ಸಾಗುವ ಅನುಭಾವದ ಹೊಳೆ. ಭವಿಯು ಲಿಂಗಧರಿಸಿ ಭಕ್ತನಾಗುತ್ತಾನೆ. ಆತ ಸ್ಥಲಾಚಾರಕ್ಕೆ ಮುಕ್ತ ನಾಗುತ್ತಾನೆ. ಅಲ್ಲಿಂದ ಅತ್ತತ್ತ ಸಾಗುವ ಉತ್ಕ್ರಾಂತಿ ಪಥದ ಸ್ವಾರಸ್ಯ ವನ್ನು ಇಲ್ಲಿ ಗಮನಿಸಬಹುದು :

"ಅಲ್ಲಿಂದತ್ತತ್ತ ಲಿಂಗಭಕ್ತನೆನಿಸುವೆ,
ಅಭ್ಯಾಸವಿಡಿದಲ್ಲಿಂದತ್ತತ್ತ ಲಿಂಗಪೂಜಕನೆನಿಸುವೆ
ಸದಾಚಾರವಿಡಿದಲ್ಲಿಂದತ್ತತ್ತ ಲಿಂಗಪ್ರಸಾದಿಯೆನಿಸುವೆ
ಅರ್ಪಿತವಿಡಿದಲ್ಲಿಂದತ್ತತ್ತ ಪ್ರಾಣಲಿಂಗಿಯೆನಿಸುವೆ
ಪ್ರಾಣಲಿಂಗವಿಡಿದಲ್ಲಿಂದತ್ತತ್ತ ಶರಣನೆನಿಸುವೆ
ಶರಣಸತಿ ಲಿಂಗಪತಿವಿಡಿದಿಲ್ಲಿಂದತ್ತತ್ತ ಲಿಂಗೈಕ್ಯನೆನಿಸುವೆ
ಉಭಯ ಜ್ಯೋತಿವಿಡಿದಲ್ಲಿಂದತ್ತತ್ತ

ಸರ್ವಾಂಗಲಿಂಗ ಸಹಮೋದತೆ, ಎಂದೆನಿಸುವೆ
ಇದು ಕಾರಣ ಕೂಡಲ ಚನ್ನಸಂಗಾ, ಲಿಂಗವಿಡಿದಲ್ಲಿಂದತ್ತತ್ತ."

## ದ್ವೈತಾದ್ವೈತಗಳ ಸಹಜ ಸಾಮರಸ್ಯ :

ಭಾರತೀಯ ದರ್ಶನ ಶಾಸ್ತ್ರದ ಹಲವು ಟೊಂಗೆ ಟಿಸಿಲುಗಳನ್ನು ಷಟ್‌ಸ್ಥಲ ಸಿದ್ಧಾಂತ ಒಂದು ಮಾಡುತ್ತದೆ. ಇಲ್ಲಿ ದ್ವೈತವೂ ಉಂಟು ಅದ್ವೈತವೂ ಉಂಟು ಆದರೆ ಅವೆರಡರ ಬೆಸುಗೆಯಲ್ಲಿ ಅನುಭವದ ಪ್ರಸನ್ನ ಪರಿಪೂರ್ಣತೆಯುಂಟು. ಮೊದಲಿನ ಮೂರು ಸ್ಥಲಗಳಾದ ಭಕ್ತಮಹೇಶ ಪ್ರಸಾದಿಗಳಲ್ಲಿ ಲಿಂಗಾಂಗ ಸ್ಥಲಭೇದವು ದ್ವೈತಭಾವದಲ್ಲಿ ತೋರುತ್ತಿದ್ದು, ಪ್ರಾಣಲಿಂಗಿ ಶರಣ ಐಕ್ಯ ಸ್ಥಲಗಳಲ್ಲಿ ಲಿಂಗಾಂಗ ಭಾವ–ಪೂಜ್ಯ–ಪೂಜಕ ಭಾವ–ಸೇವ್ಯ ಸೇವಕ ಭಾವಗಳು ಅದ್ವೈತ ಸಾಮರಸ್ಯಗಳಿಂದ ಕೂಡಿವೆ. ಇಲ್ಲಿ ಎಚ್ಚರಿಕೆಯ ಮಾತೊಂದು ಉಂಟು. ಮೊದಲ ಮೂರು ಸ್ಥಲಗಳ ದ್ವೈತಸ್ಥಿತಿ ಅದ್ವೈತಕ್ಕೆ ಹೊರತಾಗಿಲ್ಲ, ಕೊನೆಯ ಮೂರು ಸ್ಥಲಗಳ ಅದ್ವೈತಸ್ಥಿತಿ, ಮೊದಲ ಮೂರು ಸ್ಥಲ ಗಳ ದ್ವೈತವನ್ನು ಆಮೂಲಾಗ್ರ ಹೊಡೆದು ಹಾಕಿ ಕೇವಲ ದ್ವೈತವಾಗಿ ನಿಲ್ಲುವದಿಲ್ಲ ಸ್ಥೂಲವಾಗಿ ಹೇಳಬೇಕೆಂದರೆ ಷಟ್‌ಸ್ಥಲವು ದ್ವೈತ–ದ್ವೈತಾ ದ್ವೈತ–ಅದ್ವೈತಗಳಿಗೆ ಅತೀತವಾದ ಅನುಭಾವ ಸಿದ್ಧಾಂತವಾಗಿದೆ ಇದನ್ನೇ ಶರಣರು ಸಾಕಾರ – ನಿರಾಕಾರ ಎಂದು ಆಗಾಗ ವಿವೇಚಿಸಿ ರುವದುಂಟು. ಕಾರಣ ಷಟ್‌ಸ್ಥಲವು ಸಮನ್ವಯ ಯೋಗ. ಇಲ್ಲಿ ದ್ವೈತ–ಅದ್ವೈತ, ಸಾಕಾರ–ನಿರಾಕಾರ, ಶಿವ–ಶಕ್ತಿ, ಮಾಯೆ-ನಿರ್ಮಾಯ, ಭೋಗ–ತ್ಯಾಗ, ಜೀವನ ಆಧ್ಯಾತ್ಮಗಳ ಆಶ್ಚರ್ಯಕಾರಕವಾದ ಸಹಜ ಸಹಯೋಗ ಉಂಟು. ಇಲ್ಲಿ ಯಾವದೂ ತ್ಯಾಜ್ಯವಲ್ಲ. ಭೋಗವೂ ಕೂಡಾ ಸ್ವೀಕಾರರ್ಹವೇ. ಆದರೆ ಅದು ಪ್ರಸಾದ ಸ್ವರೂಪವನ್ನು ಹೊಂದಿ ಲಿಂಗಭೋಗೋಪಭೋಗವಾಗಬೇಕು.

ಶರಣರು ಜೀವನವನ್ನು ಮಾಯೆಯೆಂದು, ಭ್ರಮೆಯೆಂದು, ಕನ ಸೆಂದು, ಕೊಳೆಯೆಂದು ಕಾಣಲಿಲ್ಲ; ಆದರೆ ಕೊಳೆಯಲ್ಲಿ ಕಳೆತುಂಬಿ ಶಿಲೆ ಯಲ್ಲಿ ಶಿವತನತುಂಬಿ ಸಮಗ್ರ ಬಾಳನ್ನೇ ಪ್ರಸಾದವನ್ನಾಗಿ ಪರಿವರ್ತಿ

ಸಿದರು. ಬಾಳೊಂದು ಮಹಾಪ್ರಸಾದ, ಶಿವಪ್ರಸಾದ, ಕಾಯಕವೇ ಕೈಲಾಸ, ಮರ್ತ್ಯವೆ ಕರ್ತಾರನ ಕಮ್ಮಟ.

## ಜ್ಯೋತಿ ಮುಟ್ಟಿದುದೆಲ್ಲ ಜ್ಯೋತಿ :

ಗುರು–ಲಿಂಗ-ಜಂಗಮ-ಸಿದ್ಧಿಯೇ ಷಟ್‌ಸ್ಥಲಾಚರಣೆಯ ಅಂತಿಮ ಗುರಿ. ಜ್ಯೋತಿ ಮುಟ್ಟಿ ಜ್ಯೋತಿಯಾದಂತೆ ಭಕ್ತನು ಗುರುವನ್ನು ಸೇವಿಸಿ ಗುರುವಾಗಬಲ್ಲ ; ಲಿಂಗವನ್ನು ಪೂಜಿಸಿ ಲಿಂಗವಾಗಬಲ್ಲ ; ಜಂಗಮನನ್ನು ಆರಾಧಿಸಿ ಜಂಗಮವಾಗಬಲ್ಲ. ಇದೇ ಷಟ್‌ಸ್ಥಲದ ಪರಿಣಾಮ. ಇದನ್ನು ಪಡೆದವನೇ ಪ್ರಸಾದಿ. ಆತನ ಕಾಯ ಪ್ರಸಾದ ಕಾಯ. ವಾಣಿ ಪ್ರಸಾದ ವಾಣಿ. ಆತನ ಪ್ರಾಸಾದಿಕ ಜೀವನ ಆತನೇ ಶಿವಯೋಗಿ. ಆತನೇ ಮಹಾ ಪ್ರಸಾದಿ. ಅಂಥ ಪ್ರಸಾದ ಸಿದ್ಧರನ್ನು ಚನ್ನಬಸವಣ್ಣ ನಿಂತು ಅಗ್ಗಳಿ ಸುತ್ತಾನೆ.

> " ಗುರುಪ್ರಸಾದಗಳು ಅಪೂರ್ವ ಅಪೂರ್ವ
> ಲಿಂಗಪ್ರಸಾದಿಗಳು ಅಪೂರ್ವ ಅಪೂರ್ವ
> ಜಂಗಮ ಪ್ರಸಾದಿಗಳು ಅಪೂರ್ವ ಅಪೂರ್ವ
> ಪ್ರಸಾದಿ ಪ್ರಸಾದಿಗಳು ಅಪೂರ್ವ ಅಪೂರ್ವ
> ಗುರುಪ್ರಸಾದಿ ಗುರುಭಕ್ತನಯ್ಯ
> ಲಿಂಗಪ್ರಸಾದಿ ಪ್ರಭುದೇವರು
> ಜಂಗಮ ಪ್ರಸಾದಿ ಬಸವಣ್ಣ
> ಪ್ರಸಾದಿ ಪ್ರಸಾದಿ ಬಿಬ್ಬಿ ಬಾಚಯ್ಯ
> ನಿಕ್ಕನ ಪ್ರಸಾದಿಗಳೆಲ್ಲರೂ ಅಪ್ಪಾಯನ ಪ್ರಸಾದಿಗಳು
> ಇಂತೀ ಚತುರ್ವಿಧ ಪ್ರಸಾದಿಗಳ ಪ್ರಸಾದದಿಂದ
> ಆನು ಬದುಕಿದೆನಯ್ಯ ಕೂಡಲ ಚನ್ನ ಸಂಗಮ ದೇವಾ "

ಈ ಪ್ರಸಾದಿಸ್ಥಲ ತನುಮನಧನಗಳಿಂದಲೇ ವೇದ್ಯವಾಗಬಲ್ಲುದೆಂಬ ಭಾವ ಹೊಲ್ಲದು, ಇದೆಲ್ಲ ಸ್ವಾರ್ಥಗಳ ಸಂಕಲೆ, ನಿಜವಾದ ಪ್ರಸಾದಿಸ್ಥಲ ಘನಕ್ಕೆ ಮಹಾಘನವಾಗಿದೆ—

> " ಪ್ರಸಾದ ಪ್ರಸಾದ ಎಂದು ಹೆಸರಿಟ್ಟುಕೊಂಡು ನುಡಿದವರಿಗೆ
> ಪ್ರಸಾದವೆಲ್ಲಿಯದೊ?

ತನುಮುಟ್ಟಿಕೊಂಬುದು ಪ್ರಸಾದವಲ್ಲ
ಮನಮುಟ್ಟಿಕೊಂಬುದು ಪ್ರಸಾದವಲ್ಲ
ಧನಮುಟ್ಟಿಕೊಂಬುದು ಪ್ರಸಾದವಲ್ಲ
ಈ ತ್ರಿವಿಧ ಸಾಹಿತ್ಯದಲ್ಲಿ ಕೊಂಬುದು ಪ್ರಸಾದವಲ್ಲ
ಕೈಯೊಡ್ಡಿಕೊಂಬಾತ ಗುರುದ್ರೋಹಿ ;
ಕೈ ನೀಡಿದಡೆ ಇಕ್ಕುವಾತ ಶಿವದ್ರೋಹಿ
ಇದು ಕಾರಣ ಕೂಡಲ ಚನ್ನಸಂಗಯ್ಯನ ಪ್ರಸಾದ
ಘನಕ್ಕೆ ಮಹಾಘನ; ಏನೆಂದುಪಮಿಸುವೆನಯ್ಯ."

ಆದ್ದರಿಂದ ಷಟ್‌ಸ್ಥಲ ಪರಿವಿಡಿಯಲ್ಲಿ ಪ್ರಸಾದಿ ಸ್ಥಲ ಶರಣ ಸ್ಥಲಗಳು ವಾಚ್ಯವಾಗಿ ಬಂದಿದ್ದರೂ ಅವಾಚ್ಯವಾಗಿ ಅವು ಒಂದೇ ನಾಣ್ಯದ ಎರಡು ಮುಖಗಳು ಪ್ರಸಾದಿಯು ಶರಣನಾಗುತ್ತಾನೆ. ಶರಣನು ಪ್ರಾಸಾದಿಕ ಬಾಳನ್ನು ಬಾಳುತ್ತಾನೆ. ಅವರಿಬ್ಬರೂ ಲಿಂಗ ಜಂಗಮ ಸಾರಾಯ ಶರಣರಾಗುತ್ತಾರೆ.

"ಮನವಚನಕಾಯದಲ್ಲಿ ಆಶೆ ಇಲ್ಲದ ಶರಣ
ಅರ್ಥಪ್ರಾಣಾಭಿಮಾನದಲ್ಲಿ ಲೋಕವಿಲ್ಲದ ಶರಣ
ವಾಕ್ಕು, ಪಾಣಿ, ಪಾದ, ವಾಯು, ಗುಹ್ಯವೆಂಬ
ಕರ್ಮೇಂದ್ರಿಯಂಗಳ
ಹೊದ್ದಲೀಯದ ಶರಣ

ಸಾಕ್ಷಿ: "ಶರಣಃ ಪ್ರಾಣಮುಕ್ತಶ್ಚ ಮನೋಮುಕ್ತಶ್ಚ ಜಂಗಮ:
ಪ್ರಸಾದಿ ಕಾಯ ಮುಕ್ತಶ್ಚ ತ್ರಿವಿಧ ಸ್ತಸ್ತ್ವನಿಶ್ಚಯ:"
ಎಂಬುದಾಗಿ

"ಲಿಂಗಜಂಗಮ ಪ್ರಸಾದ ಸಾರಾಯ ಶರಣ
ಕೂಡಲ ಚನ್ನಸಂಗನ ಅಸು ಭವ ಸಾರಾಯ ಶರಣ."

ಹೀಗೆ ಈ ಷಟ್‌ಸ್ಥಲಗಳು ಸಮ್ಯಕ್ ಕ್ರಿಯೆಯಿಂದ ಅರಳಿದಾಗ ಐಕ್ಯಸ್ಥಲವು ಸರ್ವಸ್ಥಲಗಳಲ್ಲಿಯೂ ಸಿದ್ಧಿಸುತ್ತದೆ. ಆಗ ಶರಣನಿಗೆ ಸ್ಥಲಭಾವವೂ ನಾಶವಾಗುತ್ತದೆ. ಕೊನೆಗೆ ಆ ನಿಃಸ್ಥಲ ಭಾವವೂ ಶೂನ್ಯವಾಗುತ್ತದೆ. ಕಟ್ಟಕಡೆಗೆ ಚನ್ನಬಸವಣ್ಣ ಬಸವನೊಂದಿಗೆ ಒಂದಾಗುತ್ತಾನೆ. ಶಿವನೊಂದಿಗೆ ಒಂದಾಗುತ್ತಾನೆ. ಆ ಐಕ್ಯನ ಐಕ್ಯಸ್ಥಲದ ಸ್ಥಿತಿ ಈ ರೀತಿ ತೋರಿಬರುತ್ತದೆ.

"ಸ್ಥಲ ಹೋಯಿತ್ತೆನಗೆ ನಿಃಸ್ಥಲ ಹೋಯಿತ್ತೆನಗೆ
ಗೋರಿಕಲ್ಲ ಮಾಡ ಹೋಯಿತ್ತೆನಗೆ
ಹೂವಿನ ವಿಮಾನ ಹೋಯಿತ್ತೆನಗೆ
ಬಸವ ಹೋದನೆನಗೆ
ಇನ್ನು ಬಸವನ ಮನೆಯ ಜಂಗಮ ಹೋದನೆನಗೆ
ಇನ್ನು ಬಸವಾ ಬಸವಾ ಎಂದೊಡೆ
ಕೂಡಲ ಚನ್ನಸಂಗಮದೇವಾ ನಿಮ್ಮಾಣೆ

## ಜ್ಞಾನಿಯ ಕೈವಲ್ಯ :

ಚನ್ನಬಸವಣ್ಣನವರು ನಿಜ ಜ್ಞಾನಿಗಳು. ಅವರ ಸುಜ್ಞಾನ ಅನುಭವ ಮಂಟಪದ ಅನುಭಾವ ಮಂಥನದ ಫಲ. ಎನ್ನಂತರಂಗವೇ ಬಸವಣ್ಣ, ಬಹಿರಂಗ ಮಡಿವಾಳ ಮಾಚಯ್ಯ; ಈ ಉಭಯ ಸಂಗವೇ ಪ್ರಭುದೇವರು," ಎಂದು ತಮ್ಮತನದ ವಿಶ್ಲೇಷಣೆ ಮಾಡಿಕೊಂಡಿದ್ದಾರೆ. ಚನ್ನಬಸವಣ್ಣನವರ ಕ್ರಿಯಾ-ಜ್ಞಾನ ಸಮರಸ ಭಾವವನ್ನು ಕುರಿತು ಸಿದ್ಧರಾಮನು ಹೀಗೆ ಶ್ಲಾಘಿಸಿದ್ದಾನೆ—

"ಕ್ರಿಯೆ ಆದು ಚನ್ನಬಸವಣ್ಣನ ಎಡಪಾದ
ಜ್ಞಾನವದು ಚನ್ನಬಸವಣ್ಣನ ಬಲಪಾದ
ನಾನು ಅವರ ಚಮ್ಮಾವುಗೆ
ನೀನು ಅವರ ಮನೆಯ ದಾಸನು ನೋಡಯ್ಯ
ಕಪಿಲ ಸಿದ್ಧಮಲ್ಲಿಕಾರ್ಜುನ"

ಹೀಗೆ ಚನ್ನಬಸವಣ್ಣನವರಿಗೆ ಅವರ ಸಮ್ಯಕ್ ದರ್ಶನದ ಫಲವಾಗಿ ೧೨ನೆಯ ಶತಮಾನದ ಶರಣವೃಂದಾವನದಲ್ಲಿ ಎಲ್ಲಿಲ್ಲದ ಘನತೆ ಗೌರವಗಳು ದೊರೆತವು. ಸ್ವತಃ ಸಿದ್ಧರಾಮ ಶಿವಯೋಗಿ "ಎಮ್ಮಯ್ಯ ಉಸುರಿದುದು ವಚನವಾಗಿದೆ" ಎಂದ ಮಾತು ಸತ್ಯವಾಗಿದೆ ಚನ್ನಬಸ-ವಣ್ಣನವರು ತಮ್ಮ ಇತರ ಕೃತಿಗಳಾದ ಕರಣಹಸಿಗೆ, ಮಿಶ್ರಾರ್ಪಣ, ಹಿರಿಯ ಮಂತ್ರ ಗೋಪ್ಯ, ಪದಮಂತ್ರಗೋಪ್ಯಗಳಲ್ಲಿ ಅತಿ ಉಚ್ಚ-ಮಟ್ಟದ ಷಟ್‌ಸ್ಥಲ ಸಿದ್ಧಾಂತವನ್ನು ಕೃತಿಸಿದ್ದಾರೆ. ಅಲ್ಲಿಯ ಕೃತಿ

ಇವರ ಸಾಧನೆಯು ನೈಜ ಸಿದ್ಧಿಯ ಅಭಿವ್ಯಕ್ತಿಯೇ ಆಗಿದೆ. ಚನ್ನಬಸವಣ್ಣ ನವರು ಲಿಂಗೈಕ್ಯದ ನಿಲುವನ್ನು ಮುಟ್ಟಿದ್ದರೆಂಬುದಕ್ಕೆ—

ಸ್ಥಲವೆಂದೆನ್ನೆ ನಿಃಸ್ಥಲವೆಂದೆನ್ನೆ, ನಿರ್ಣಯವೆನಗಾದ ಬಳಿಕ ಏನೆಂದ ರಿಯೆನಯ್ಯ ಇದು ಕಾರಣ ಕೂಡಲ ಸಂಗಯ್ಯ ಲಿಂಗೈಕ್ಯವೆಂದೆನ್ನೆ" ಎಂಬ ಮಾತು ಸಾಕ್ಷಿಯಾಗಿದೆ.

ಚನ್ನಬಸವಣ್ಣನವರ ಘನವನಪ್ಪಿದ ನಿಲವಿನ ಮಹತ್ತೆಗೆ ಅಲ್ಲಮ-ಪ್ರಭುದೇವರ ಕೆಳಗಿನ ವಚನ ನೈವೇದ್ಯವೆತ್ತಿದೆ—

"ಕಿರಿಯರಾದಡೇನು ಹಿರಿಯರಾದಡೇನು
ಅರಿವಿಂಗೆ ಹಿರಿದು ಕಿರಿದುಂಟೆ?
ಆದಿ ಅನಾದಿಯಿಲ್ಲದಂದು
ಅಜಾಂಡ ಬ್ರಹ್ಮಾಂಡ ಕೋಟಿಗಳು ಉದಯವಾಗದಂದು,
ಗುಹೇಶ್ವಲಿಂಗದಲ್ಲಿ ನೀನೊಬ್ಬನೇ ಮಹಾವಿಜ್ಞಾನಿಯೆಂಬುದು
ಕಾಣಬಂದಿತ್ತು, ಕಾಣಾ ಚನ್ನಬಸವಣ್ಣ.

# ಸೊನ್ನಲಿಗೆಯ ಸಿದ್ಧರಾಮ ಹಾಗೂ ಅವನ ತತ್ತ್ವಗಳು

**ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು**

[ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳು, ತಾ. ೩-೭-೬೬ ರಂದು ಧಾರವಾಡ ರೇಡಿಯೋಕೇಂದ್ರದಿಂದ ಮಾಡಿದ ಪ್ರಸಾರಭಾಷಣ.]

ಸೊನ್ನಲಿಗೆಯ ಸಿದ್ಧರಾಮನು ವೀರಶೈವ ಇತಿಹಾಸದಲ್ಲಿ ಬಹು ಪ್ರಸಿದ್ಧನಾದ ಶಿವಶರಣನು. ಭೂಲೋಕದ ಮುಕ್ಕಣ್ಣನಾಗಿ, ಸೊನ್ನಲಿಗೆಯನ್ನು ಭೂಲೋಕದ ಕೈಲಾಸವನ್ನಾಗಿ ಮಾಡಿದ ಮಹಾನುಭಾವ.

ಸೊನ್ನಲಿಗೆಯ ಶರಣದಂಪತಿಗಳಾದ ಮುದ್ದಯ್ಯ-ಸುಗ್ಗವ್ವೆಯವರ ಪವಿತ್ರ ಗರ್ಭದಿಂದ ಉದಯಿಸಿದವನೇ ನಮ್ಮ ಶಿವಯೋಗಿ ಸಿದ್ಧರಾಮ. ಯಾವ ಜನ್ಮದ ಅಪೂರ್ವ ಆಕಾಂಕ್ಷೆಯ ಅದಮ್ಯ ಆಕರ್ಷಣೆಯೋ ಅದು! ಅವನನ್ನು ಶ್ರೀಶೈಲಕ್ಕೆ ಕರೆದೊಯ್ಯಿತು. ಅಲ್ಲಿ ಮಲ್ಲಯ್ಯನನ್ನು ಬಹು ಭಕ್ತಿಯಿಂದ ಒಲಿಸಿ ಆತನನ್ನು ಸೊನ್ನಲಿಗೆಯಲ್ಲಿಯೇ ನೆಲೆಸುವಂತೆ ಮಾಡಿದನು. ಗುಡಿ ಗೋಪುರಗಳನ್ನು ಕಟ್ಟಿ, ಕೆರೆ ಕಾಲುವೆಗಳನ್ನು ತೋಡಿ, ಸೊನ್ನಲಾಪುರವನ್ನು ಅಭಿನವ ಶ್ರೀಶೈಲವನ್ನಾಗಿ ಮಾರ್ಪಡಿಸಿದನು. ಕರ್ಮಯೋಗಿ ಸಿದ್ಧರಾಮನ ಕ್ರತುಶಕ್ತಿ ಸೊನ್ನಲಿಗೆಯ ಸುತ್ತಣ ಗ್ರಾಮ ನಿವಾಸಿಗಳಿಗೆ ಒಂದು ಕೌತುಕವೆನಿಸಿತು. ಅಂದು ಆತನ ಘನತೆಯನ್ನು ಕೊಂಡಾಡುವರೆಷ್ಟೋ ಜನ. 'ನನ್ನಿಂದಲೇ ಇದೆಲ್ಲ ಕಾರ್ಯ' ಎಂಬ 'ಬಿಮ್ಮು' ಸಿದ್ಧರಾಮನ ಸಮತೆಯನ್ನು ತಲೆಕೆಳಗೆ ಮಾಡಿದೆ.

ಅಕ್ಕಟ! ವಿಖ್ಯಾತಿ ಪೂಜಾ ಲಾಭದಿಚ್ಛೆಯಿಂದ ಸಿದ್ಧರಾಮನು ತನ್ನ ಬಾಳನ್ನೇ ಹಾಳಾಗಿಸಹತ್ತಿದ್ದಾನೆ. ಈಗವನ ದಾರಿಯನ್ನು ತಿದ್ದಬೇಕು.

ಹಾಗೆಂದು ಪ್ರಭು ನಿಶ್ಚಯಿಸಿ ಸೊನ್ನಲಿಗೆಯತ್ತ ಧಾವಿಸಿ ಬಂದಿದ್ದಾರೆ.

ಪಾಪ! ಚಿಕ್ಕ ಸಂಸಾರವನ್ನು 'ಮಾಯೆ' ಎಂದು ಅಲ್ಲಗಳೆದ ಸಿದ್ಧಾರಾಮನಿಗೆ ಹಿರಿಯ ಸಂಸಾರದ ವ್ಯಾಮೋಹ ಗಂಟು ಬಿದ್ದಿದೆ. ನೂಲ ಸಂಕೋಲೆಗಳನ್ನು ಹರಿದು ಹೋದಕಾಲಿಗೆ, ಹೊನ್ನ ಶೃಂಗಲೆಗಳು ಬಿದ್ದಿವೆ. 'ಗುಹೇಶ್ವರ' ಕಲ್ಲು ದೇವರ ಮಾಡಿ, ಕಲ್ಲು ಮನೆಯು ಮಾಡಿ ಆ ಕಲ್ಲ ಕಲ್ಲುಮೇಲೆ ಕೆಡಹಿದರೆ ದೇವರೆತ್ತ ಹೋದನೋ ಎಂದು ಪ್ರಭು ಮಿಡುಕಿದರು.

ಮಾತಿಗೆ ಮಾತು ನಡೆಯಿತು. ಕರ್ಮವೇ ಪ್ರಾಣವೆಂದು ಸಿದ್ಧರಾಮನು ಸಾಧಿಸಿದನು. ಕರ್ಮವೇ ಪ್ರಾಣವಾದರೆ ಜ್ಞಾನೋದಯಕ್ಕೆ ಸ್ಥಾನವೇ ಇಲ್ಲ: ಜ್ಞಾನಾರಾಧನೆಯಾಗದಿದ್ದರೆ ಲಿಂಗವನ್ನು ಅರಿಯಲಾಗದೆಂದು ಪ್ರಭುಗಳ ಉತ್ತರ. ಹೀಗೆ ತರ್ಕ ವಿತರ್ಕ ನಡೆದವು. ಅವ ಕರ್ಮಯೋಗಿ, ಇವ ಶಿವಯೋಗಿ. ಪ್ರಭುಗಳ ದಾರಿಯಲ್ಲಿ ಮುನ್ನಡೆಯುವದಕ್ಕೆ ಸಿದ್ಧಾರಾಮ ಸೋತು. ಕ್ರೋಧವಶನಾಗಿ ಕಿಡಿಗಣ್ಣು ತೆರೆದನು. ಪ್ರಭು ಅವನ ಕೋಪ ಜ್ವಾಲೆಯನ್ನು ತಮ್ಮ ಅಂಗಾಲದಲ್ಲಿ ಅಡಗಿಸಿಕೊಂಡರು! ಗುಹೇಶ್ವರನ ಶರಣರು ಉಪಮಾತೀತರಲ್ಲವೇ?

ಕೋಪ ಅಡಗಿತು. ಕರ್ಮದ ಪರೆ ಹರಿಯಿತು. ವಿವೇಕೋದಯವಾಯಿತು. ಸಿದ್ಧರಾಮ ಅಲ್ಲಮ ಪ್ರಭುವಿನೆಡೆ ನೋಡಿದನು. 'ಪ್ರಭು ನಾನೀನೆಂಬ ಭೇದವಳಿದು ಲಿಂಗದಲ್ಲಿ ಸೇರುವ ಹವಣವನ್ನು ಸುಂದರವಾಗಿ ಪ್ರತಿಪಾದಿಸಿದರು. ಕರ್ಮಯೋಗದಿಂದ ಶಿವಯೋಗಕ್ಕೆ ತಂದು ಬಿಟ್ಟರು. ಕಲ್ಯಾಣಕ್ಕೆ ಕರೆದೊಯ್ದರು. ಭಕ್ತಿ ಭಾಂಡಾರಿ ಬಸವಣ್ಣನವರ ಸಮ್ಮುಖದಲ್ಲಿ ಚನ್ನ ಬಸವಣ್ಣನವರಿಂದ ಲಿಂಗ ದೀಕ್ಷೆಯನ್ನು ಕೊಡಿಸಿದರು. ಸಿದ್ಧರಾಮನು ಶಿವಯೋಗಿಯಾದನು. ಷಟ್‌ಸ್ಥಲ ಬ್ರಹ್ಮಿಯಾದನು.

ಶಿವಯೋಗಿ ಸಿದ್ಧರಾಮನ ವ್ಯಕ್ತಿತ್ವವನ್ನು ಕುರಿತು ಬಸವ ಮೊದಲಾದ ಶರಣ ಶರಣೆಯರು ಬಹುಮುಖವಾಗಿ ಹಾಡಿ ಹರಸಿದ್ದಾರೆ. ಕನ್ನಡ ಉದ್ದಾಮ ಕವಿಗಳಾದ ಹರಿಹರ, ರಾಘವಾಂಕ, ವಿರೂಪಾಕ್ಷ ಪಂಡಿತ, ಪಾಲ್ಕುರಿಕೆ ಸೋಮನಾಥ ಮೊದಲಾದ ಕವಿಗಳು, ಸಿದ್ಧರಾಮರಗಳೆ,

ಸಿದ್ಧರಾಮ ಚಾರಿತ್ರ, ಸಿದ್ಧರಾಮ ಪುರಾಣ, ಸಂಸ್ಕೃತ ಸಿದ್ಧರಾಮೋದಯಮ್ ಎಂಬ ಗ್ರಂಥಗಳನ್ನು ರಚಿಸಿದ್ದಾರೆ.

ಶಿವಶರಣ ಸಂಗೋಷ್ಠಿಯಲ್ಲಿ ಅನುಭಾವ ಸಿದ್ಧಿಯ ಭಾಗ್ಯ ಸಿದ್ಧರಾಮನಿಗೆ ಲಭಿಸಿತು. ಅವನು ತನ್ನ ಹೃದಯಾನುಭವವನ್ನು ತತ್ವನಿಷ್ಠ ಕವಿಯೋಗಿ ಆಗಿ ಹಾಡಿದನು. 'ಕಪಿಲ ಸಿದ್ಧಮಲ್ಲಿಕಾರ್ಜುನ' ಎಂಬ ಅಂಕಿತದಿಂದ ಅರವತ್ತೆಂಟು ಸಹಸ್ರ ವಚನಗಳನ್ನು ಹಾಡಿರುವುದಲ್ಲದೆ, 'ಯೋಗಿನಾಥ' ಎಂಬ ಹೆಸರಿನಿಂದ ಸ್ತೋತ್ರ ಸಾಹಿತ್ಯವನ್ನು ರಚಿಸಿದ್ದಾನೆ. ಬಸವ ಸ್ತೋತ್ರ ತ್ರಿವಿಧಿ, ಮಿಶ್ರಸ್ತೋತ್ರ ತ್ರಿವಿಧಿ, ಅಷ್ಟಾವರಣ ಸ್ತೋತ್ರ ತ್ರಿವಿಧಿ, ಮಂತ್ರ ಗೋಪ್ಯ, ಕಾಲ ಜ್ಞಾನ ಮುಂತಾದ ಗ್ರಂಥಗಳನ್ನು ಬರೆದಿರುತ್ತಾನೆ. ಇವನು ಕ್ರಿಸ್ತಶಕ-೧೧೬೦ರಲ್ಲಿ ಜೀವಿಸಿದ್ದನೆಂದು ಕವಿಚರಿತೆಯಿಂದ ತಿಳಿದು ಬರುತ್ತಿದೆ. ಈತನು ಸ್ತೋತ್ರ ಸಾಹಿತ್ಯದಲ್ಲಿ ಜೀವನದ ರೂಪುರೇಷೆಗಳನ್ನು ಬಹು ಸುಂದರವಾಗಿ ಚಿತ್ರಿಸಿದ್ದಾನೆ. ಬಸವಾದಿ ಪ್ರಮಥರನ್ನು ಆಳ್ತಿಯಿಂದ ಸ್ತುತಿಸಿದ್ದಾನೆ. ತತ್ವ ವಿವೇಚನೆ ಮಾಡಿದ್ದಾನೆ.

ಸ್ವತಂತ್ರ ಪ್ರಭೆ-ಪ್ರತಿಭೆಗಳಿಂದ ಬೆಳಗಿದ ಸಿದ್ಧರಾಮನು ಶರಣನಷ್ಟೇ ಅಲ್ಲ; ಪ್ರಸಿದ್ಧ ವಚನಕಾರ. ಅವನ ವಚನಗಳಲ್ಲಿ ವಿಶ್ವಧರ್ಮದ ಸಾರ ಸರ್ವಸ್ವವಿದೆ. ಆತ್ಮ ಚಿಂತನೆ ಇದೆ. ಅವನು ಸಮಾಜದ ನೀತಿ, ನಿಯಮ, ಪಾಪ, ಪುಣ್ಯ, ಆಚಾರ, ವಿಚಾರಗಳನ್ನು ಭಾವಪೂರ್ಣವಾಗಿಯೂ ಹೃದಯಂಗಮವಾಗಿಯೂ ತಿಳಿಸಿರುತ್ತಾನೆ. ಅವನು ಕರುಣಾ ಮೂರ್ತಿ. ಯಾರನ್ನೂ ನೋಯಿಸಲಾರ. "ಎಲೆ ಅಯ್ಯಾ ನಿಮ್ಮವರ ನೋವೆ ಎನ್ನ ನೋವು ನೋಡಾ" ಎಂದು ಸಕಲ ಜೀವಾವಳಿಗೆ ಲೇಸನೇ ಬಯಸಿದ್ದಾನೆ. ಪರಾವಲಂಬಿಯಾಗದೆ ಎಲ್ಲರೂ ಕಾಯಕದಿಂದಲೇ ಜೀವಿಸಬೇಕೆಂದು ಸಿದ್ಧರಾಮನ ಅಭಿಮತ. "ಕೃಷಿಯ ಮಾಡಿ ಉಣ್ಣದೆ ಹಸಿವ ಪರಿವ ಪರಿ ಪರಿ ಇನ್ನೆಂತು?" ಎಂದು ಇಲ್ಲಿ ತನ್ನ ಕರ್ತವ್ಯ ನಿಷ್ಠೆಯನ್ನು ನಿರೂಪಿಸಿದ್ದಾನೆ. ಸಿದ್ಧರಾಮಯ್ಯನಿಗೆ ನಿಗೂಢ ತತ್ವವನ್ನು ಸುಲಭ ಶೈಲಿಯಲ್ಲಿ ತಿಳಿಸುವ ಕಲೆ ಸಹಜವಾಗಿ ಬಂದಿದೆ. "ನೀರು ಕಿರದ ಸಂದುಗಳ ಹಂಸೆ ಬಿಚ್ಚ ಬಲ್ಲುದು ನೋಡಯ್ಯ. ದೇಹದ ಜೀವನದ ಸಂದು ನೀವು ಬಿಚ್ಚ

ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ" ಎಂಬುದಾಗಿ ಜೀವ-ಪರಮಾತ್ಮ ಸಂಬಂಧವನ್ನು ಮನೋಜ್ಞವಾಗಿ ನಿರೂಪಿಸಿದ್ದಾನೆ. ಶಿವಾದ್ವೈತ ಸಿದ್ಧಾಂತದ ಸಾರವನ್ನೇ ಸೂರೆ ಗೊಂಡಿದ್ದಾನೆ. "ಸಮವೃಷ್ಟಿಯಾಗದವನ ಸದ್ಭಕ್ತ ನೆಂತೆಂಬೆ" "ಕುಲದಲ್ಲಿ ಶೂದ್ರನಾದರೆ ಮನದಲ್ಲಿ ಮಹಾದೇವ ನೆಲೆ ಗೊಂಡವನೇ ವೀರಶೈವನೋಡಾ" ಇತ್ಯಾದಿಯಾಗಿ ನುಡಿದಿದ್ದಾನೆ. ಪ್ರಸಾದ ವಾಣಿಯಿಂದ ಹೊರಹೊಮ್ಮಿದ ಆತನ ತತ್ವಗಳಲ್ಲಿ ಭಾರತೀಯ ಸಂಸ್ಕೃತಿ ಹಾಸು ಹೊಕ್ಕಾಗಿದೆ. ಅಂದಿನ ಶಿವಯೋಗಸಿದ್ಧ ಲೋಕಕ್ಕೆ ಎತ್ತಿ ತೋರಿದ ಸಮತೆಯ ಹಾಗು ಭಾವೈಕ್ಯತೆಯ ಮಹಾ ಮಂತ್ರ ಇಂದಿನ ಭಾರತೀಯರ ಬಾಳನ್ನು ಬೆಳಗಿಸುವಂತಾಗಿದೆ. ಮಾನವ ಕೋಟಿಯ ಉದ್ಧಾರವೇ ಸಿದ್ಧ ರಾಮನ ಪರಮಗುರಿಯಾಗಿದೆ. ಆತನ ಪ್ರತಿ ವಚನಗಳು ಜಾಗತಿಕ ತತ್ವಕ್ಕೆ ಅಂಟಿಕೊಂಡಿವೆ. ವಚನ ಭಾಂಡಾರದ ಅಮೂಲ್ಯರತ್ನಗಳಾಗಿವೆ. ಕನ್ನಡ ಸಾಹಿತ್ಯಾಕಾಶದಲ್ಲಿ ದೇದೀಪ್ಯಮಾನವಾಗಿ ಬೆಳಗುತ್ತಲಿವೆ.

# ವೀರಶೈವರು : ಅಂದು—ಇಂದು

[ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳು ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಅವರು ತಾ. ೮-೧೨-೧೯೭೫ ರಂದು ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದಲ್ಲಿ "ವೀರಶೈವ ಸೇವಾ ಸಂಪತ್ತು" ಪರಿಷತ್ತಿನಲ್ಲಿ ನೀಡಿದ ಅಧ್ಯಕ್ಷೀಯ ಭಾಷಣ.]

೧೯ನೆಯ ಶತಮಾನದ ಆರಂಭದಿಂದ ವ್ಯಾಪಾರ, ಉದ್ಯಮ, ಔದ್ಯೋಗಿಕಗಳಲ್ಲಿ ವೀರಶೈವರು ಅಂಶಿಕವಾಗಿ ಪಾಲುಗೊಂಡಿದ್ದಾರೆ. ಸಂಖ್ಯಾದೃಷ್ಟಿಯಿಂದ ಇವರು ಪ್ರಧಾನವಾಗಿರುವ ವಿಜಾಪೂರ, ಧಾರವಾಡ. ಬೆಳಗಾವಿ, ರಾಯಚೂರ, ಗುಲಬುರ್ಗಾ, ಚಿತ್ರದುರ್ಗ ಶಿವಮೊಗ್ಗಾ ಮೊದಲಾದ ಜಿಲ್ಲೆಗಳಲ್ಲಿ ಇವರು ಪ್ರಮುಖರಾಗಿಲ್ಲ. ವಾಣಿಜ್ಯ ವ್ಯವಹಾರಗಳ ಎಲ್ಲ ಕ್ಷೇತ್ರಗಳಲ್ಲಿಯೂ ಇವರು ಅಂಶಿಕವಾಗಿ ಪಾಲುಗೊಂಡರೂ ಅದರಲ್ಲಿ ಸ್ವಾಯತ್ತತೆ ಸಾಧಿಸಿಲ್ಲ. ಬದಲಾಗಿ ಕುಸಿಯುತ್ತ ನಡೆದಿದೆ.

ಇದು ನಮ್ಮ ರಾಜಕೀಯ ಸಾಮಾಜಿಕ ಧಾರ್ಮಿಕ ರಂಗಗಳ-ಲ್ಲಿರುವ ಕೋಮುವಾರ-ಬಣ-ಪಕ್ಷ-ಪಂಗಡ-ಸ್ಪರ್ಧೆ-ಪ್ರತಿ ಸ್ಪರ್ಧೆಗಳ ವಿಷಫಲ. ವ್ಯಾಪಾರಿ ರಂಗದಲ್ಲಿರುವ ಕೆಲವು ಪ್ರಮುಖ ನಗರಗಳಲ್ಲಿ ಇಂದು ಎಲ್ಲೋ ದೂರದಿಂದ ಆಗಮಿಸಿದ ಪರಭಾಷೆ-ಪರ-ಪ್ರಾಂತೀಯರು ಸರ್ವಾಧಿಕಾರದಂತೆ ಶಕ್ತಿ ಸಂಪಾದಿಸಿ ಪ್ರಬಲರಾಗಿದ್ದಾರೆ. ಪರಕೀಯರೆಂದು ನಮಗೆ ಅಸಂತೋಷವಿಲ್ಲ. ಅವರೂ ಬರಲಿ, ಆದರೆ "ಕನ್ನಡದ ಅನ್ನ ಕನ್ನಡಿಗರಿಂದ ವಂಚಿತವಾಗುತ್ತದೆ." ನಾವು ಅವರ ಗುಮಾಸ್ತರಾಗಿ, ಏಜಂಟರಾಗಿ ಸಾಲಗಾರರಾಗಿ ಬಾಳುತ್ತಿರುವದು, ಶೋಚನೀಯ. ಮನೆ ನಮ್ಮದು, ನೆಲ, ನಮ್ಮದು, ಆದರೂ ನಮ್ಮ ಮನೆಯಲ್ಲಿ ನಾವು ಆಳುಗಳು, ಅವರು ದೊರೆಗಳು. ಇದು ಅವರ ತಪ್ಪಲ್ಲ. ನಮ್ಮ ತಪ್ಪು ಕಾರಣ ನಮ್ಮಲ್ಲಿ ಭಕ್ತರಲ್ಲಿ ವೈರ, ಭಕ್ತ ಸ್ವಾಮಿಗಳಲ್ಲಿ ವೈರ, ಲಿಂಗವಂತರಾಗಿ ಅಂತರ್ಜಾತೀಯ

ಗುಂಪುಗಾರಿಕೆ ಇವು ಭೀಕರವಾಗಿ ಬೆಳೆದು ನಮ್ಮ ಶಕ್ತಿಯು ಪತನ ವಾಗಿದೆ; ಇಂದು ಸಮಗ್ರ ಕನ್ನಡ ನಾಡಿನ ಏಕೈಕ ಲಿಂಗವಂತರ ವಾಣಿಜ್ಯ ಸಂಸ್ಥೆಯಿಲ್ಲ. ಆದರೆ ಗಾಣಿಗರ ಸಂಘ, ಬಣಜಿಗರ ಸಂಘ, ನೇಕಾರರ ಸಂಘ, ಕುಂಬಾರರು, ಉಪ್ಪಾರರು, ಸಮಗಾರರು ಮೊದಲಾದ ದೈವಗಳ ಸಂಘಗಳು ಊರೂರಿಗೆ ಇದ್ದು, ಅವು ಪರಸ್ಪರ ಸ್ಪರ್ಧಾ-ತ್ಮಕವಾಗಿವೆ. ಒಂದು ಬಗೆಯ ವೈರದೃಷ್ಟಿ ಅವುಗಳಲ್ಲಿದೆ. ಇದರಿಂದ ನಮ್ಮ ಸಮಾಜಕ್ಕೆ ತನ್ನದೇ ಬ್ಯಾಂಕ ಇಲ್ಲ. ತನ್ನದೇ ಆದ ಆರ್ಥಿಕ ವ್ಯವಸ್ಥೆ ಇಲ್ಲ. ತನ್ನದೆ ಆದ ವ್ಯಾಪಾರಿ ಧ್ಯೇಯ ಧೋರಣೆಗಳಿಲ್ಲ. ತನ್ನದೇ ಆದ ಔದ್ಯೋಗಿಕ ವಿಸ್ತರಣೆಗಳಿಲ್ಲ. ಹೀಗಾಗಿ ಈ ರಂಗಗಳಲ್ಲಿ ಪ್ರಬಲರಾದ ಸಂಘಟನೆಯುಳ್ಳ ಪರಪ್ರಾಂತದವರು ಪ್ರವೇಶಿಸಿ, ನಮ್ಮನ್ನೇ ತಮ್ಮ ಆಳುಗಳನ್ನಾಗಿ ದುಡಿಸಿಕೊಳ್ಳುತ್ತಿದ್ದಾರೆ. ಅದು ನಮ್ಮ ಒಡಕಿನ ಕಹಿ ಫಲವಲ್ಲದೆ ಮತ್ತೇನು ?

ಮಹಾರಾಷ್ಟ್ರದಲ್ಲಿ-ಕರ್ನಾಟಕದವರು, ಗುಜರಾತಿಗಳು, ಮಾರ-ವಾಡಿಗಳು, ಬಂದು ತಮ್ಮ ವ್ಯಾಪಾರ ಉದ್ದಿಮೆಗಳನ್ನು ಸ್ಥಾಪಿಸಿ, ಮರಾಠಿಗರ ಸಂಪತ್ತನ್ನು ದೋಚಿಕೊಳ್ಳುವರೆಂಬ ಭಯದಿಂದ "ಶಿವಸೇನೆ" ಸ್ಥಾಪಿತವಾಯಿತು. ಅವರು ಅನೇಕ ಸಲ ರಕ್ತಪಾತ-ವಾಮಮಾರ್ಗ-ವಿನಾಶಕಾರಕ ಹರತಾಳಗಳನ್ನು ಮಾಡಿ ತಮ್ಮ ಸ್ಥಳಗಳನ್ನು ತಮಗಾಗಿ ಭದ್ರತೆ ಮಾಡಿಕೊಂಡರು. ಆದರೆ ಅಂಥ ಆಕ್ರಮಣಕಾರಿ ಸಂಘಟನೆ ನಮಗ ಬೇಕಿಲ್ಲ. ಕೊನೆಯಪಕ್ಷ "ಶರಣರ ಶಾಂತಿ ಸೇನೆ"ಯಾದರೂ ಬೇಕೆ ಬೇಕು. ಇದರಿಂದ ಸಮಗ್ರ ಕನ್ನಡ ನಾಡಿನ ಗುರು-ವಿರಕ್ತಪೀಠದ ಸ್ವಾಮಿಗಳು ಸಕಲ ಉಪಜಾತಿಗಳ, ಬಣಗಳ ಮುಖಂಡರು, ಎಲ್ಲ ಭಕ್ತರು ಒಂದು ಸ್ವಯಂಶಾಸಿತ ಶಿಸ್ತು—ಸಂಘಟನೆಗೊಳಪಟ್ಟು, ವಿಧಾಯಕವಾದ ಸರ್ವಾಂಗೀಣ ಪ್ರಗತಿಯ ರಾಷ್ಟ್ರೀಯ ಭಾವನೆಗೆ ವಿರೋಧವಲ್ಲದ ಪ್ರಗತಿಯಲ್ಲಿ ಪಾಲುಗೊಳ್ಳಬೇಕು.

ಕ್ರಿಶ್ಚಿಯನ್ ಮಿಶನರಿಗಳು ತಮ್ಮವೇ ಆದ ಫ್ಯಾಕ್ಟರಿಗಳು, ಉದ್ಯೋಗ, ವ್ಯವಸಾಯಂಗಳನ್ನು ನಡೆಸಿ, ಸಮಾಜವನ್ನು ಆರ್ಥಿಕವಾಗಿ

ಬಲಪಡಿಸುತ್ತಾರೆ. ನಮ್ಮಲ್ಲಿ ಭಕ್ತಿ ಸಾಕಷ್ಟಿದೆ. ಶ್ರದ್ಧೆ ಇದೆ. ಆದರೆ ಒಕ್ಕಟ್ಟು ಇಲ್ಲ, ಬೃಹದಾಕಾರದ ಆರ್ಥಿಕ ಕೇಂದ್ರ ಸಂಸ್ಥೆಗಳಿಂದಲೇ ಸಮಾಜ ಬಾಳಬಲ್ಲುದು, ಎಂಬುದಕ್ಕೆ ವೆಟಿಕನ್ನಿನ ಕ್ರಿಶ್ಚಿಯನ್ ಕೇಂದ್ರ ಸಂಸ್ಥೆಯೇ ಮುಖ್ಯ ಉದಾಹರಣೆಯಾಗಿದೆ.

## ರಾಜಕೀಯ ಕ್ಷೇತ್ರ

ಸ್ವಾತಂತ್ರ್ಯಪೂರ್ವದಲ್ಲಿ ಸಮಗ್ರ ವೀರಶೈವ ಜನಾಂಗ, ಭಾರತೀಯ ಸ್ವಾತಂತ್ರ್ಯಕ್ಕೆ ಆತ್ಮಾರ್ಪಣೆ ಮಾಡಿತು. ಭಾರತೀಯ ಶಾಂತಿವಾದಿಗಳ ಪ್ರಮುಖರಾಗಿ ಹರ್ಡೇಕರ ಮಂಜಪ್ಪನವರು ಕರ್ನಾಟಕದ ಮುಂದಾಳ್ತನ ವಹಿಸಿದರೆ, ಬೈಲಹೊಂಗಲದ ವಾಲಿ ಚನ್ನಪ್ಪನವರು ಕ್ರಾಂತಿವಾದಿಗಳ ಮುಂದಾಳ್ತನ ವಹಿಸಿದರು. ಬ್ರಿಟೀಶರಿಗೆ ಹಗಲಿನಲ್ಲಿಯೂ ಈ ಮಹಾವ್ಯಕ್ತಿಗಳು ಕುತ್ತು ತಂದೊಡ್ಡಿದ್ದರು.

ಸ್ವಾತಂತ್ರ್ಯೋತ್ತರ ಕಾಲೀನ ಕರ್ನಾಟಕದ ರಾಜಕೀಯವೆಂದರೆ ವಿರಶೈವರ ರಾಜಕೀಯ. ಅವರು, ಮತದಿಂದ ವೀರಶೈವರಾದರೂ ತತ್ವದಿಂದ ಭಾರತೀಯರಾದರು. ವೀರಶೈವಧರ್ಮ ಕರ್ನಾಟಕಕ್ಕೆ, ಭಾರತಕ್ಕೆ ಅನೇಕ ಅದ್ಭುತ ಮುಖಂಡರ ಸರಮಾಲೆಯನ್ನೇ ನೀಡಿತು, ಉದಾಹರಣೆಗೆ ಬಿ. ಡಿ. ಜತ್ತಿ, ನಿಜಲಿಂಗಪ್ಪ, ಎಸ್. ಆರ್. ಕಂಠಿ. ವೀರೇಂದ್ರಪಾಟೀಲ ಮೊದಲಾದವರನ್ನು ಹೆಸರಿಸಬಹುದು, ಭಾರತೀಯ ರಾಜಕೀಯ ಮಜಲುಗಳು ನೂರಾರು ಸ್ಥಳಗಳಲ್ಲಿ ವೀರಶೈವರು ಮಂತ್ರಿಗಳಾಗಿ, ಮುಖ್ಯಮಂತ್ರಿಗಳಾಗಿ, ಲೆಫ್ಟಿನೆಂಟ-ಗವರ್ನರ ಆಗಿ, ಗವರ್ನರ ಆಗಿ, ಭಾರತದ ಉಪಾಧ್ಯಕ್ಷರಾಗಿ ನಾನಾವಿಧವಾಗಿ ಸೇವೆ ಸಲ್ಲಿಸಿದ್ದಾರೆ; ಸಲ್ಲಿಸುತ್ತಿದ್ದಾರೆ.

ಆದರೆ ಭಾರತೀಯ ಆರ್ಥಿಕ ಹಾಗೂ ರಾಜಕೀಯ ಪ್ರಪಂಚಕ್ಕೆ ವೀರಶೈವರು ಸಲ್ಲಿಸಿದ ಸೇವೆ ಅಮೌಲ್ಯವೂ ಅಗಾಧವೂ ಆಗಿದ್ದರೂ ಅವರು ತಿಂದ ಅಪಘಾತ ಪ್ರಜ್ಞಾಘಾತಗಳು ಇನ್ನೂ ಹೆಚ್ಚು.

ರಾಜಕೀಯ ಕ್ಷೇತ್ರ ಸಮಗ್ರ ವೀರಶೈವ ಜನಾಂಗ ನುಚ್ಚುನೂರಾಗಲು ಪ್ರಧಾನಕಾರಣವಾಯಿತು. ರಾಜಕೀಯವೆಂದರೆ ಹತ್ತಾರು ಪಕ್ಷ

ಪಂಗಡಗಳು ಇರುವದು ಸ್ವಾಭಾವಿಕ, ಈ ಪಕ್ಷಗಳು ತಮ್ಮ ತಮ್ಮಲ್ಲೇ ಸ್ಪರ್ಧಾಟ ಮೇಲಾಟ, ಸಂಹಾರ ಪ್ರತಿಸಂಹಾರ ನಡೆಸಿ ಚುನಾವಣೆ ಗಳಿಗಾಗಿ ಪಣತೊಡುವದು ಸಹಜ. ಹೀಗಾಗಿ ಈ ಎಲ್ಲ ಪ್ರಮುಖ ಪಕ್ಷಗಳಲ್ಲಿಯೂ ವೀರಶೈವ ನಾಯಕರು, ಊರಪ್ರಮುಖರು, ಸ್ತ್ರೀಯರು, ಸಮಾಜ ಕಾರ್ಯಕರ್ತರು, ಹಳ್ಳಿಯ ಗ್ರಾಮಾಂತರ ಧುರೀಣರು, ಪಾಲ್ಗೊಂಡದ್ದರಿಂದ ಇವರ ಪಕ್ಷ ಪ್ರತಿಪಕ್ಷಗಳ ಕಚ್ಚಾಟದ ಪರಿಣಾಮದಲ್ಲಿ ವೀರಶೈವರು ತಮ್ಮ ತಮ್ಮಲ್ಲೇ ಕಚ್ಚಾಡಿದರು.

—"ಅಂಗದ ಮೇಲೆ ಲಿಂಗವಿದ್ದವರೆಲ್ಲ ಸಂಗಮನಾಥನೆಂಬೆ" ಎಂಬ ಬಸವಣ್ಣನವರ ತತ್ವ ಮೂಲೆಗುಂಪಾಗಿ, ಅಂಗದ ಮೇಲೆ ಲಿಂಗವಿದ್ದವರೆಲ್ಲ ಪಕ್ಷ ಪ್ರತಿಪಕ್ಷಗಳ ಪರಮ ವೈರಿಗಳಾದರು. ರಾಜಕೀಯದ ಹೋರಾಟ ವಾಸ್ತವಿಕವಾಗಿ ವೀರಶೈವರ ಹೋರಾಟವಾಯಿತು. ಇದರಿಂದ ಸಮಾಜ ರಚನೆ ನುಚ್ಚುನೂರಾಗಿ ಹೇಳ ಹೆಸರಿಲ್ಲದಂತಾಯಿತು. ಇಸ್ಲಾಂ ಧರ್ಮ ದಲ್ಲಿ ಈ ದೋಷವಿಲ್ಲ, ಅವರು ಎಲ್ಲಿಯೂ ತಮ್ಮ ಮತದಲ್ಲಿಯೇ ಇಬ್ಭಾಗ ವಾಗಿ ಹೋರಾಟವಾಗುವ ಸ್ಥಿತಿ ತಂದಿಲ್ಲ. ಜಗತ್ತಿನ ಹತ್ತು ದಿಕ್ಕಿನ ಇಸ್ಲಾಮರೆಲ್ಲಾ ಒಂದೆ, ಅದೇ ರೀತಿ ಜಗತ್ತಿನ ಹತ್ತು ದಿಕ್ಕಿನ ವೀರಶೈವ ರೆಲ್ಲಾ ಒಂದೇ ಎಂಬ ಭಾವ ಮೂಡಿಬಂದರೆ ಮಾತ್ರ ನಮ್ಮ ಉದ್ಧಾರ ಸಾಧ್ಯ, ಇಲ್ಲವಾದರೆ ನಮ್ಮ ಅಧಃಪತನಕ್ಕೆ ನಾವೇ ಕಾರಣರು.–

**ತಾತ್ವಿಕ ಕಾಣಿಕೆ :**

ಆರ್ಥಿಕ ರಂಗಕ್ಕೆ ವೀರಶೈವ ಧರ್ಮದ ತಾತ್ವಿಕ ಕಾಣಿಕೆ ಜಗತ್ತಿನಲ್ಲೆ ಪ್ರಶ್ನಾತೀತ, ಅಮೌಲ್ಯ, ಅರ್ಥ ಪ್ರಪಂಚವು ದುಡಿಮೆ ಹಾಗೂ ದುಡಿ ತದ ಫಲವಾಗಿ ಸಂಬಳ, ಪಗಾರ, ವೇತನ, ಕೂಲಿ ರೂಪದಲ್ಲಿ ಇದೆ, ಇದಕ್ಕೇ ದುಡಿತ ಹಾಗೂ ಆರ್ಥಿಕ ಪ್ರತಿಫಲ ಎನ್ನಬಹುದು. ದುಡಿತಕ್ಕೆ ವೀರಶೈವರು 'ಕಾಯಕ'ವೆಂದು ಕರೆದರು. ದುಡಿತದ ಫಲಕ್ಕೆ ಇವರು ಪಗಾರ ಇಲ್ಲವೇ ಫಾಯದೇ ಎನ್ನಲಿಲ್ಲ; 'ಪ್ರಸಾದ'ವೆಂದರು. ಇದೊಂದು ವೀರಶೈವರ ಉಜ್ವಲ ಅರ್ಥಶಾಸ್ತ್ರ.

ಜೀವನ ಕಾಯಕಮಯ, ಪ್ರಸಾದಮಯವಾದಾಗಲೇ ಜೀವನ್ಮುಕ್ತಿ

ವ್ಯಾಪಾರರಂಗದ ಫಾಯದೇ ತತ್ವದಲ್ಲಿ ಚಿತ್ತ ಚಾಂಚಲ್ಯ, ಅತೃಪ್ತಿ, ದುರಾಶೆ, ಅತ್ಯಾಶೆ, ಪೈಶಾಚಿಕ ಜೀಪಾಸೆಗಳಿಗೆ ಆಸ್ಪದವಿದೆ. ಆದರೆ ಶರಣರಂಗದ ಪ್ರಸಾದದಲ್ಲಿ ಈ ಬಗೆಯ ಅತೃಪ್ತಿ–ದುರಾಶೆಗಳಿಗೆ ಅವಕಾಶವಿಲ್ಲ. ಕಾರಣ ಪ್ರಸಾದವೆಂದರೇನೇ ಶಾಂತಿ–ಸಮಾಧಾನ–ಸಂಯಮ–ಆನಂದದ ಪ್ರತೀಕ, ಪ್ರಸಾದ ಶಿವನ ಸ್ವರೂಪ. ನಾವು ಫ್ಯಾಕ್ಟರಿ ಉತ್ಪನ್ನದಲ್ಲಿ ಹತ್ತು ಲಕ್ಷ ಫಾಯಿದೆ ಆಯಿತು ಅನ್ನಬಾರದು; ಹತ್ತು ಲಕ್ಷ 'ಪ್ರಸಾದ'ವಾಯಿತು ಎಂಬ ಭಾವಬೇಕು. ನಿಮ್ಮ ಕೆಲಸಕ್ಕೆ ಎಷ್ಟು ಪಗಾರ ಎನ್ನುವ ಬದಲು; ನಿಮ್ಮ ಕಾಯಕದ ಪ್ರಸಾದವೆಷ್ಟು ಎಂಬ ಭಾವಬೇಕು.

**ಚನ್ನಬಸವಣ್ಣನವರು "ಪ್ರಸಾದ" ಮಹಿಮೆಯನ್ನು ಕೇಳಬಹುದು–**

ಪ್ರಸಾದ ಪ್ರಸಾದ ಎಂದು ಹೆಸರಿಟ್ಟುಕೊಂಡು ನುಡಿವರಿಗೆ ಪ್ರಸಾದ-ವೆಲ್ಲಿಯದೊ?
ತನುಮುಟ್ಟಿಕೆವೆಂಬುದು ಪ್ರಸಾದವಲ್ಲ ಮನಮುಟ್ಟಿಕೊಂಬುದು ಪ್ರಸಾದವಲ್ಲ
ಧನಮುಟ್ಟಿಕೊಂಬುದು ಪ್ರಸಾದವಲ್ಲ,
ಈ ತ್ರಿವಿಧ ಸಾಹಿತ್ಯದಲ್ಲಿ ಕೊಂಬುದು ಪ್ರಸಾದವಲ್ಲ.
ಕೈಯೊಡ್ಡಿಕೊಂಬಾತ ಗುರುದ್ರೋಹಿ,
ಕೈ ನೀಡಿದೊಡೆ ಇಕ್ಕುವಾತ ಶಿವದ್ರೋಹಿ
ಇದು ಕಾರಣ, ಕೂಡಲ ಚನ್ನ ಸಂಗಯ್ಯನ ಪ್ರಸಾದ,
ಘನಕ್ಕೆ ಮಹಾಘನ! ಏನೆಂದುಪಮಿಸುವೆನಯ್ಯಾ!

**"ಕಾಯಕ"ದ ಬಗ್ಗೆ ನುಲಿಯ ಚಂದಯ್ಯನ ವಚನ**

ಕಂದಿಸಿ ಕುಂದಿಸಿ ಬಂಧಿಸಿ ನೋಯಿಸಿ
ಕಂಡ ಕಂಡವರ ಬೇಡಿ ತಂದು
ಜಂಗಮಲಿಂಗಕ್ಕೆ ಮಾಡಿಹೆನೆಂಬ
ದುಂದುಗದ ಮಾಟಕ್ಕೆ ಲಿಂಗಕ್ಕೆ ನೈವೇದ್ಯ ಸಲ್ಲದು.
ತನು ಕರಗಿ ಮನ ಬಳಲಿ ಬಂದ ತೆರದಿ ಅನುವಸರಿದು
ಸಂದಿಲ್ಲದೆ ಸಂಶಯವಿಲ್ಲದೇ ಜಂಗಮಲಿಂಗಕ್ಕೆ ದಾಸೋಹ ಮಾಟ

ಕಾರಿಯು ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕರ್ಪಿತವಲ್ಲದೆ
ದುರಾಸೆಯಿಂದ ಬಂದುದು ಅನರ್ಪಿತ
ಇದು ಕಾರಣ ಸತ್ಯಶುದ್ಧ ಕಾಯಕದ ನಿತ್ಯ-ದ್ರವ್ಯವಾದರೆ
ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯ

**ಅರ್ಥಶಾಸ್ತ್ರದ "ಕಾಯಕ" ಪ್ರಪಂಚಕ್ಕೆ ಆಧುನಿಕ ಪಾಶ್ಚಿಮಾತ್ಯರು :**

ಕಾರ್ಯಗೌರವ (Dignity of labour) ಹೇಳುತ್ತಾರೆ. ಇದು "ಕಾರ್ಲಮಾರ್ಕ್ಸರ ಘೋಷಣೆ" ಅಂದರೆ ಕಾರ್ಯ ಯಾವುದೇ ಇರಲಿ; ಎಲ್ಲವೂ ಸರಿಸಮಾನ ಎಂದು ಅರ್ಥ. ಇದು ಆಧುನಿಕ ಸಮಾಜವಾದಿಗಳ ಅಮರ ಸಿದ್ಧಾಂತ.

ಆದರೆ ೮೦೦ ವರ್ಷಗಳ ಹಿಂದೆ ಕಾಯಕದಲ್ಲಿ ಮೇಲು—ಕೀಳುಗಳನ್ನು ಹೊಡೆದು ಹಾಕಿ, "ಮೆಚ್ಚೆ ಕಾಯಕದಿಂದ ಮಂತ್ರಿಕಾಯಕದವರೆಗೆ ಎಲ್ಲರೂ ಸಮಾನ ಸ್ಥಿತಿಯಲ್ಲಿ ಬೆರೆಯುತ್ತಿದ್ದರು. ಪಾಶ್ಚಿಮಾತ್ಯ ಜಗತ್ತಿನ ಈ "ಕಾರ್ಯ ಗೌರವ"; ೮೦೦ ರ್ಷಗಳ ಹಿಂದೆ ಶರಣರ "ಕಾಯಕ ಸಮಾನತೆಯಲ್ಲಿದೆ.

**ಕಾಯಕದಲ್ಲಿ ಜಾತಿ ಇಲ್ಲ :**

ಸೆಟ್ಟಿಯೆಂಬೆನೆ ಸಿರಿಯಾಳನ ?
ಮಡಿವಾಳನೆಂಬೆನೆ ಮಾಚಯ್ಯನ-?
ಡೋಹರನೆಂಬೆನೆ ಕಕ್ಕಯ್ಯನ ?
ಮಾದಾರನೆಂಬೆನೆ ಚನ್ನಯ್ಯನ ?
ಆನು ಹಾರುವನೆಂದೊಡೆ ಕೂಡಲ ಸಂಗಯ್ಯ ನಗುವನಯ್ಯ

**ಕಾಯಕದಲ್ಲಿ ಮೇಲು-ಕೀಳು ಇಲ್ಲ :**

ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ !
ಜಲವೊಂದೇ ಶೌಚಾಚಮನಕ್ಕೆ !
ಕುಲವೊಂದೇ ತನ್ನ ತಾನರಿದವಂಗೆ !
ಫಲವೊಂದೇ ಷಡುದರ್ಶನ ಮುಕ್ತಿಗೆ !
ನಿಲವೊಂದೇ ಕೂಡಲಸಂಗಮದೇವ.
ನಮ್ಮನರಿದವಂಗೆ !

ಹೀಗೆ ಶರಣರು ತೋರಿದ ದಾರಿ ಮಹಾಬೆಳಗಿನ ದಾರಿ. ಅವರ ಆಧ್ಯಾತ್ಮ ಜೀವನವಿವೇಕವೂ ಆಗಿದೆ. ಬಾಳಿನಲ್ಲಿ ಬೆಳಗನ್ನು ಕಂಡ ಅನು-ಭಾವಿಗಳು ಅವರು, ಅವರ ಸಿದ್ಧಾಂತ ಕೇವಲ ಸಿದ್ಧಾಂತವಲ್ಲ; ಅದರೆ ಜೀವನ ಸಿದ್ಧಾಂತ. ದರ್ಶನ ಕೇವಲ ದರ್ಶನವಲ್ಲ; ಬಾಳಿನ ದರ್ಶನ. ಲಿಂಗವಂತರು ಲಿಂಗವನ್ನು ಪೂಜಿಸಿದರೆ ಅದೇ ರಾಷ್ಟ್ರದ ಉದ್ಧಾರ !

# ಭಾವೈಕ್ಯತೆ

[ತಾ. ೧೬-೭-೬೭ ರವಿವಾರ ಧಾರವಾಡ ಆಕಾಶವಾಣಿಯಿಂದ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು, ಮಾಡಿದ ಪ್ರಸಾರ ಭಾಷಣ.]

ಇಂದು ಜಾಗತಿಕ ಪರಿಸ್ಥಿತಿಯು ತೀರ ವಿಲಕ್ಷಣವಾಗಿದೆ. ಎಲ್ಲೆಡೆಯಯೂ ಅಶಾಂತಿ, ಅನೈಕತೆ, ಅಸಹಕಾರಗಳೇ ತಲೆ ಎತ್ತಿ ನಿಂತಿವೆ. ಮಾನವ ಮಾನವರಲ್ಲಿ ಸಹೋದರ ಭಾವನೆ ಅಳಿದು ಹೋಗಿದೆ. ಆಧ್ಯಾ-ತ್ಮಿಕ ಗೊತ್ತುಗುರಿಯೊಂದಿದೆ ಎಂಬ ನಂಬಿಕೆಯೂ ಗೋಚರಿಸದಾಗಿದೆ. ಧರ್ಮ. ದೇವರು ಸತ್ಯ ಇವುಗಳ ನೈಜ ಮೌಲ್ಯ ತಿಳಿಯದಾಗಿದೆ; ಒಂದು ವೇಳೆ ತಿಳಿದರೂ ಮಾನವತೆ ನೇರ ಮಾರ್ಗದಲ್ಲಿ ನಡೆಯದಾಗಿದೆ. ಮಾನವತೆಯನ್ನು ಪಡೆದ ಮನುಷ್ಯರ ಬರಗಾಲ ಬಂದಿದೆ. ಓರ್ವ ಚೌತ್ತರೇಯ ಸಾಧು ಇದೇ ಮಾತನ್ನೆ ಸಮರ್ಥಿಸಿದ್ದಾನೆ. "ಆದಮಿ ಆದಮಿ ಸಬ್ ಕೋಇ ಕಹೇ, ಆದಮಿಕಾ ಬಡಾ ಸುಕಾಲ ಹೈ, ಮಗರ ಜಿಸ್ ಆದಿಮೀಮೆ ಆದಮಿ ಪನ ಹೋ ಉಸಕಾ ಬಡಾ ಮಕಾಲ ಹೈ." ಒಟ್ಟಾರೆ ಮಾನವ ಬಾಳಿನ ಗೋಳು ಅಳಿಯದಾಗಿದೆ, ಸಮಾಜದಲ್ಲಿ ಚಿರಶಾಂತಿ ಬೀಜವು ಮೊಳೆಯದಾಗಿದೆ. ಪರಿಪೂಷ್ಟವಾಗಿ ಬೆಳೆಯದಾಗಿದೆ.

ಇಂದಿನ ಪ್ರಪಂಚದಲ್ಲಿ ಪ್ರಜಾಪ್ರಭುತ್ವ, ಸಮಾಜವಾದ, ಸಾಮ್ಯ-ವಾದ ಮುಂತಾದ ರಾಜಕೀಯ ಸಾಮಾಜಿಕ ಮತ್ತು ಆರ್ಥಿಕ ಸಿದ್ಧಾಂತ ಗಳು ಪ್ರತಿಯೊಂದು ಸಮಾಜವನ್ನು ತನ್ನದೇ ಆದ ಹಾದಿಯಲ್ಲಿ ನಡೆಸಿ-ಕೊಂಡು ಹೋಗಲು ಒಂದರೊಡನೊಂದು ಮಹಾ ರಭಸದಿಂದ ಸ್ಪರ್ಧಿ-ಸುತ್ತಿವೆ.

ಇದು ಜಾಗತಿಕ ಪರಿಸ್ಥಿತಿಯಾದರೆ, ನಮ್ಮ ಸಮಾಜದ ಸಮಸ್ಯೆ ಗಳೊಂದು ಕಡೆಯಾದರೆ, ರಾಜಕೀಯ ಆರ್ಥಿಕ ಸಮಸ್ಯೆಗಳ ಕರಾಳ ನೃತ್ಯ ಮತ್ತೊಂದು ಕಡೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಪ್ರತಿಯೊಬ್ಬರ

ಮನಸ್ಸುಗಳು ಕಲಕಿ ಕದಡಿ ಹೋಗಿವೆ. ಅದಕ್ಕಾಗಿ ಸಮಗೋದು ದರ್ಶನ ಬೇಕು; ಭರವಸೆ ಬೇಕು; ಅದು ಭಾವೈಕ್ಯತೆಯಿಂದಲೇ ಸಾಧ್ಯ ಎನ್ನುವ ಮಾತು ಅನೇಕ ಧರ್ಮ ಪ್ರವಾದಿಗಳ ಅಭಿಮತವಾಗಿದೆ. ಭಾವೈಕ್ಯತೆಯು ನಿತ್ಯದ ನಮ್ಮ ಪ್ರಜ್ಞೆಯನ್ನು ಹಾಗು ಸಾಮಾಜಿಕ ಹಿತದ ಅರಿವನ್ನುಂಟು ಮಾಡುತ್ತಿದೆ. ಅದರಲ್ಲಿ ಮಹಾನ್ ಶಕ್ತಿ ಇದೆ. ಭಾವೈಕ್ಯತೆಯ ವಿಶ್ವವಿಶಾಲವಾದ ಸಂದೇಶವಾಗಿದೆ, ಸಾಮ್ಯವಾದದ ಘೋಷಣೆಯಾಗಿದೆ. ಸರ್ವರಲ್ಲಿಯೂ ಸಮಾನತೆಯು ಭಾವ ಒಡಮೂಡಿ ಬರಬೇಕು. ಬಡವ-ಬಲ್ಲಿದರೆಂಬಲ್ಲಿ ಭೇದ ಭಾವ ಅಳಿಯಬೇಕು. ವಿವಿಧತೆಯಲ್ಲಿ ಏಕತ್ವವನ್ನು ಕಾಣಬೇಕು. ಅನೈಕತೆ, ಮನೆ ಮುರುಕತನದ ಹೇಸಿ ಜೀವನ ಇವೆಲ್ಲ ನಮ್ಮ ಅಧಃಪತನದ ಮುನ್ಸೂಚನೆಯಾಗಿದೆ. ಮಾನವ ಇಂತಹ ಅನರ್ಥ ಪರಂಪರೆಯಲ್ಲಿ ಸಿಲುಕಿ ಸಾಯಬಾರದೆಂಬುದನ್ನೇ ತಿಳಿದು, ವೇದ ಋಷಿಗಳು ಎಚ್ಚರಿಸಿದ್ದಾರೆ. ಋಗ್ವೇದದ ಕೊನೆಯ ಮಂಡಲದಲ್ಲಿ "ನೀವೆಲ್ಲ ಒಂದೇ ಚಿತ್ತ. ಒಂದೇ ಮನುಸ್ಸುಳ್ಳವರಾಗಿರಿ, ನಿಮ್ಮ ಮಂತ್ರವು ಒಂದಾಗಿರಲಿ. ನಿಮ್ಮ ಅಂತಃಕರಣ ಒಂದಾಗಿ ನೀವೆಲ್ಲರೂ ಐಕ್ಯತೆಯಿಂದ ಇದ್ದುಕೊಳ್ಳಿರಿ" ಎಂದು ಹೇಳಿರುವ ಅವರ ಉಪದೇಶ ಬಹಳ ಮಹತ್ವಪೂರ್ಣವಾಗಿವೆ.

ಭಾವೈಕ್ಯತೆಯು ಮಾತು ಭರತಖಂಡಕ್ಕೆ ಹೊಸದೇನೂ ಅಲ್ಲ. ಅಂದೂ ಭಾರತೀಯರ ಜೀವನದಲ್ಲಿ ಹಾಸಹೊಕ್ಕಾಗಿತ್ತೆಂಬುದನ್ನು ಅನೇಕ ಐತಿಹ್ಯಗಳಿಂದ ಮನಗಾಣಬಹುದು. "ಶುನಿಚೈವ- ಶ್ವಪಾಕೇಚ ಪಂಡಿತಾಃ ಸಮದರ್ಶಿನಃ" ಎಂಬ ಭಗವದ್ಗೀತಾ ವಾಕ್ಯವು ಮೂಲತಃ ಆ ತತ್ವವನ್ನೆ ಒಳಗೊಂಡಿದೆ, ಭಗವಾನ್ ಬುದ್ಧನು ತನ್ನ ರಾಜ ವೈಭವವನ್ನು ತ್ಯಾಗಮಾಡಿ ಪ್ರಭುದ್ಧನಾಗಿ "ಸಂಘಂ ಶರಣಂ ಗಚ್ಛಾಮಿ" ಎಂದು ಸಂಘ ಜೀವನದ ಮೇಲಿನ ತನ್ನ ಶ್ರದ್ಧೆಯನ್ನು ವ್ಯಕ್ತಗೊಳಿಸಿದನು, ಈ ಐಕ್ಯಮತ್ಯದ ಸಿದ್ಧಾಂತವನ್ನು ಸಾರ್ವತ್ರಿಕವಾಗಿ ರೂಢಿಗೊಳಿಸಿದವು. ಮಹಾನುಭಾವರಾದ ಬಸವಣ್ಣನವರು ಭಾವೈಕ್ಯತೆಯ ಭದ್ರ ಬುನಾದಿಯ ಮೇಲೆಯೇ ಅನುಭವ ಮಂಟಪವನ್ನು ಕಟ್ಟಿ ಸಾಮಾಜಿಕ ಕ್ರಾಂತಿಯನ್ನು ಮಾಡಿದರು. ಸಂಘ ಜೀವಿಗಳಾದರು,

ನೆರೆಮನೆಯವರ ಕಷ್ಟಕಾರ್ಪಣ್ಯಗಳನ್ನರಿತು ಇನ್ನೊಬ್ಬರಿಗೆ ಬೇಕಾದ ಅಗತ್ಯ ವಸ್ತುಗಳನ್ನೂ ಹಂಚಿಕೊಳ್ಳುವ ಸಹಕಾರ ಮನೋಭಾವನೆಯನ್ನು ತಂದುಕೊಟ್ಟರು, "ಕಾಗೆ ಒಂದಗುಳ ಕಂಡರೆ ಕರೆಯದೆ ತನ್ನ ಬಳಗವನು ? ಕೋಳಿ ಒಂದು ಗುಟುಕಂ ಕಂಡರೆ ಕೂಗಿ ಕರೆಯದೇ ತನ್ನ ಕುಲವೆಲ್ಲವ ? ಎಂದು ಮಾನವನಾಗಿ ಭಾವಿಸಿದ ಮೇಲೆ ಅವುಗಳಿಗಿಂತಲೂ ಕಡಿಮೆಯಾಗಿ ಬಾಳದೆ ಎಲ್ಲರೂ ಕೂಡಿ ಬಾಳುವದನ್ನು ಕಲಿಯಬೇಕೆಂಬುದನ್ನು ಆಚರಿಸಿ ಹೇಳಿದರು, ಸಮಾಜದಲ್ಲಿ ಭಾವೈಕ್ಯತೆಯ ಮನೋಭಾವ ಬೆಳೆದು ಬರಬೇಕಾದರೆ ಧರ್ಮದ ಅಗತ್ಯತೆಯೂ ಬಹಳವಾಗಿದೆ. ಧರ್ಮ ಐಕ್ಯತೆಯ ಸಾಧನವಾಗಿದೆ. ಬೇರೆ ಬೇರೆ ಇರುವವರನ್ನು ಒಂದೆಡೆ ಒಗ್ಗೂಡಿಸುವುದೇ ಧರ್ಮದ ಧ್ಯೇಯವಾಗಿದೆ. ಅಧೋಗತಿಗಿಳಿಯುತ್ತಿರುವ ಜಗತ್ತನ್ನು ಊರ್ಧ್ವಮುಖಿಯನ್ನಾಗಿ ಮಾಡಬಲ್ಲ ಶಕ್ತಿಯೆಂದರೆ ಧರ್ಮವೊಂದೇ ಎಂದು ಧಾರಾಳವಾಗಿ ಹೇಳಬಹುದು. "ಸರ್ವೇಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ, ಸರ್ವೆ ಭದ್ರಾಣಿ ಪಶ್ಯಂತು ಮಾ ಕಶ್ಚಿತ್ ದುಃಖ ಮಾಭಾಗ್ ಭವೇತ್" ಎಂಬುದೇ ಭಾವೈಕ್ಯತೆಯ ಮೂಲಮಂತ್ರವಾಗಿದೆ. ಇಂತಹ ಧಾರ್ಮಿಕ ತೇಜದಲ್ಲಿ ಜಗತ್ತು ರಾರಾಜಿಸಿದರೆ ಖಂಡಿತವಾಗಿ ಭಾವೈಕ್ಯತೆಯ ಮನೋಭಾವನೆ ಪ್ರತಿಯೊಬ್ಬರಲ್ಲಿ ಒಡಮೂಡಿ ಶಾಂತಿ ಸಮಾಧಾನಗಳು ನೆಲೆಸುವವು,

ಸತ್ಯಂ ಶಿವಂ ಸುಂದರಂ

## ಚಿತ್ತರಗಿ–ಇಲ್ಲಕಲ್ಲ ಶಿವಾನುಭವ ಚರವರ್ಯರಾದ

# ಶ್ರೀ ವಿಜಯ ಮಹಾಂತ ಶಿವಯೋಗಿಗಳವರು

[ಪೂಜ್ಯ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು ಹುನಗುಂದದ ೩೩ನೆಯ ಮಂಟಪಪೂಜಾ ನಿಮಿತ್ತ ನೀಡಿದ ಬಾನುಲಿ ಭಾಷಣ]

ಲಿಂಗೈಕ್ಯ ಚಿತ್ತರಗಿ ಶಿವಾನುಭವ ಚರವರ್ಯರಾದ ಇಲ್ಲಕಲ್ಲ ಶ್ರೀ ವಿಜಯಮಹಾಂತ ಶಿವಯೋಗಿಗಳವರು ಆಧ್ಯಾತ್ಮಿಕ ವಿಚಾರವನ್ನಳವಡಿಸಿ ಕೊಂಡ ಮಹಾನುಭಾವಿಗಳು. ಶಮೆ, ದಮೆ, ವಿವೇಕ, ವೈರಾಗ್ಯ, ಪರಿ ಪೂರ್ಣಭಾವ, ಶಾಂತಿ, ಕಾರುಣ್ಯ, ಸತ್ಯ, ಸದ್ಭಕ್ತಿ, ಶಿವಜ್ಞಾನ, ಶಿವಾನಂದ ಗಳೇ ಸಾಕಾರವಾಗಿದ್ದ ಮಹಾತ್ಮರವರು.

ಅವರು ಈ ಯುಗದ ಅತ್ಯಂತ ನಿಷ್ಠಾವಂತ ಜೀವನ ಶಿಲ್ಪಿಗಳು. ಪ್ರತಿನಿತ್ಯ ಮಾನವ ಜೀವನಮಟ್ಟ ಏರಬೇಕು, ಮಾನವಕುಲ ಸುಖ, ಸಮಾಧಾನ, ಶಾಂತಿ, ಪರಸ್ಪರ, ಸಹಯೋಗದ ಯುಗದಲ್ಲಿ ಕಾಲಿಡಬೇಕು ಎಂಬುದು ಅವರ ಧ್ಯೇಯವಾಗಿತ್ತು. ಅದಕ್ಕಾಗಿ ಅಹರ್ನಿಶ ಮಾನವ ಜೀವನದ ವೈಯಕ್ತಿಕ ಹಾಗೂ ಸಾಮಾಜಿಕ ವಿಕಾಸದ ಗುಟ್ಟು–ಗಾರಿ ಗಳನ್ನು ಶೋಧಿಸುವುದರಲ್ಲಿಯೇ ಪರಿತಪಿಸುವ ಪವಿತ್ರ ಜೀವನ ಅವರ ದಾಗಿತ್ತು. ಚಿತ್ತರಗಿ ಮಹಾಂತ ಶಿವಯೋಗಿಗಳವರ ಜೀವನ, ವಿಚಾರ, ಧ್ಯೇಯ–ಧೋರಣೆಗಳು ಬಹು ಮಹತ್ವಪೂರ್ಣವಾದವುಗಳು. ಅವರ ಜೀವನ ತೆರೆದಿಟ್ಟ ಹೊತ್ತಿಗೆಯಂತೆ, ಸಾರ್ವಜನಿಕ ರಂಗಮಂಚದ ಮೇಲೆ ಹಗಲಿರುಳು ಎಲ್ಲರಿಗೂ ಕಾಣುವಂತೆ, ಆಶ್ರಮಧರ್ಮಕ್ಕೆ ವ್ಯತ್ಯಯ ಬಾರ ದಂತೆ, ಅವರು ತಮ್ಮ ಜೀವನವನ್ನು ಸರ್ವಾಂಗ ಸುಂದರವಾಗಿ ನಡೆಯಿ ಸಿದರು. ಮುಚ್ಚು ಮರೆ, ಗೌಪ್ಯ ಇವು ಪಾಪದ ಮೂಲ ಎಂದು ಭಾವಿ ಸಿದ್ದರು.

ಲೋಕಸಂಗ್ರಹ ಕಾರ್ಯವೇ ತಮ್ಮ ಜೀವಿತದ ಇತಿ ಕರ್ತವ್ಯವೆಂದು ಬಗೆದು, ಚಿತ್ತರಗಿ ಮಹಾಂತ ಶಿವಯೋಗಿಗಳವರು ಜಂಗಮಜ್ಯೋತಿ

ಯಾಗಿ, ನಾಡೆಲ್ಲ ಸಂಚರಿಸಿದರು ಪರಮಾನುಭವದ ಪರಿಮಳ ಬೆರೆದ, ಸುಳಿಗಾಳಿಯಂತೆ ಸುಳಿದರು; ಮಾನವರ ಮನದ ಮೊಗ್ಗುಗಳನ್ನು ಅರಳಿ ಸುವ ತಂಗಾಳಿಯಾಗಿ ಸುಳಿದರು; ಆತ್ಮ ಕಮಲಗಳ ಅಲರಿಕೆಗೆ ಜಂಗಮ ಸೂರ್ಯನಾಗಿ ತೊಳಗಿದರು. 'ಬೇಡುವಾತ ಜಂಗಮನಲ್ಲ' ಎಂಬುದು ಅವರ ಜೀವನದ ಜೀವಾಳವಾಗಿತ್ತು. 'ಸರ್ವಲೋಕೋಪಕಾರಾಯ ಚರತ್ಯತಿಥಿರೂಪೇಣ' ಎಂಬುದನ್ನು ಅವರ ಬಾಳು ಸ್ಪಷ್ಟಪಡಿಸು ತ್ತಿದ್ದಿತು. ಆಶಾರಾಹಿತ್ಯ ಅವರ ಬಾಳಿನ ಪಲ್ಲವಿಯಾಗಿದ್ದಿತು.

ಸರ್ವ–ಧರ್ಮ ಸಮನ್ವಯವನ್ನರಿಸಿಕೊಂಡು, ಸಕಲ ಮತದವ ರಿಗೂ ಶ್ರೇಯ–ಪ್ರೇಮಗಳನ್ನು ಅನುಗ್ರಹಿಸಿ, ಅಮರರಾದ ಅನುಭಾವಿ ಗಳು ಚಿತ್ತರಗಿ ಮಹಾಂತ ಶಿವಯೋಗಿಗಳು. ಮಹಮ್ಮದಿಯರಾದ– ಇಲಕಲ್ಲಿನ ಮುರ್ತುಜಾ ಖಾದರಿಯವರೊಂದಿಗೆ ಆಧ್ಯಾತ್ಮಿಕವಾಗಿ, ಆತ್ಮೀಯತೆಯಿಂದ ಮಾತನಾಡಿದ್ದುಂಟು. ಸರ್ವ–ಧರ್ಮನಿಷ್ಠರಾದ, ಪರಧರ್ಮ ಸಹಿಷ್ಣುಗಳಾಗಿ ಪೀಠದ ಸಂಪ್ರದಾಯದಂತೆ, ಸ್ವಧರ್ಮ ಉದ್ಧಾರ ಕಾರ್ಯ ಮಾಡುತ್ತ. ಆ ಮಣಿಹದ ಮುಖಾಂತರ ಇಡೀ ಮಾನವ ಕೋಟಿಯ ಹಿತಚಿಂತನೆಯನ್ನು ಸಾಧಿಸಿದರು. ಸರ್ವರಲ್ಲಿಯೂ ಸಮ ದರ್ಶತ್ವವನ್ನು ಕಂಡು ಮಹಂತರಾದರು.

ಕರ್ನಾಟಕ ಆಧ್ಯಾತ್ಮ ಕೇಂದ್ರದಂತಿರುವ, ಶ್ರೀ ಶಿವಯೋಗ ಮಂದಿರ ಮಹಾಸಂಸ್ಥೆಯು ನಿರ್ಮಾಣವಾಗುವ ಸ್ಥಾನ ನಿರ್ದೇಶನಗೈದ ಶಿವಯೋಗಿಗಳು.

ಶ್ರೀ ವಿಜಯ ಮಹಾಂತ ಶಿವಯೋಗಿಗಳಿಗೆ, ಕನ್ನಡ ಕುಲೋದ್ಧಾ ರಕರಾದ ಮಹಾತ್ಮಾ ಬಸವಣ್ಣನವರಲ್ಲಿ ಅನುಪಮ ಶ್ರದ್ಧೆ ಇತ್ತು. ಅವರ ವಚನಗಳಿಗೆ 'ಅಪ್ಪನ ವಚನ' ಎಂದು ಸಂಬೋಧಿಸುತ್ತಿದ್ದರಲ್ಲದೆ, ಅವರ ವಚನ ಶಾಸ್ತ್ರದ ತಾಳೆಗರಿ ಹೊತ್ತಿಗೆಯನ್ನು ಬೆನ್ನಿಗೆ ಕಟ್ಟಿಕೊಂಡು ಸಂಚರಿಸುತ್ತಿದ್ದರು; ಸಂಪೂಜಿಸುತ್ತಿದ್ದರು. ದೀನ–ದಲಿತರ ರಕ್ಷಕರಾಗಿ ದ್ದಂತೆ–ಕವಿಗಳಿಗೆ, ಪಂಡಿತರಿಗೆ ಆಧಾರಸ್ತಂಭರಾಗಿದ್ದರು. ಶ್ರೀ ವಿಜಯ ಮಹಾಂತ ಶಿವಯೋಗಿಗಳು ಬಹಿರಂಗದಾಡಂಬರಕ್ಕೆ ಮೆಚ್ಚುತ್ತಿದ್ದಿಲ್ಲ. ಅಂತರಂಗದ ಆತ್ಮ ಸೌಂದರ್ಯವನ್ನು ಸಂಗಳಿಸಿಕೊಂಡು, ನಿರಂತರವೂ

ಧ್ಯಾನತಲ್ಲೀನರಾಗುತ್ತಿದ್ದರು ಅವರು ಮಹರ್ಷಿಗಳಂತಿದ್ದರು; ಶಾಪಾನುಗ್ರಹ ಶಕ್ತಿ ಸಂಪನ್ನರು ಹಾಗು ಸ್ವಾವಲಂಬಿಗಳಾಗಿದ್ದರು; ಸದಾ ಕಾರ್ಯತತ್ಪರರಾಗಿರುತ್ತಿದ್ದರು. ಮಹಾಕಾರಣಿಕ ಪುರುಷರಾದ, ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳವರಿಗೆ ಮಾರ್ಗದರ್ಶಕರಾಗಿದ್ದರು. ತಮ್ಮ ಆತ್ಮ ಶಕ್ತಿ ಪ್ರಭಾವದಿಂದಾಗಿ, ಸಹಸ್ರಾರು ಪವಾಡಗಳನ್ನು ಮಾಡಿ, ಮಾನವ ಕೋಟಿಯನ್ನು ಎಚ್ಚರಿಸಿ ಬೆಳಕು ನೀಡಿದ್ದಾರೆ.

ಶ್ರೀ ವಿಜಯ ಮಹಾಂತ ಶಿವಯೋಗಿಗಳ ಮೇಲೆ, ಅಂದಿನಿಂದ ಇಂದಿನ ವರೆಗೂ, ಸಕಲ ಜಾತಿ–ಧರ್ಮ–ಪಂಥಗಳ ಜನತೆ ಇಟ್ಟಿರುವ ಭಕ್ತಿ–ವಿಶ್ವಾಸಗಳೇ–ಅವರು ಸಾಧಿಸಿ, ಸಿದ್ಧಿ ಪಡೆದ ಜೀವನಕ್ಕೆ ಜ್ವಲಂತ ಸಾಕ್ಷಿಯಾಗಿವೆ. ಶ್ರೀ ಚಿತ್ತರಗಿ ಶಿವಯೋಗಿ ಪಾದವಿಟ್ಟ ಪ್ರದೇಶದಲ್ಲೆಲ್ಲ ಎಂದಿನಿಂದಲೂ ಹಿಂದು–ಮುಸಲ್ಮಾನರು ಸ್ನೇಹ–ಸೌಹಾರ್ದಭಾವದಿಂದಿರುವದನ್ನು ಕಣ್ಣಾರೆ ಕಾಣಬಹುದಾಗಿದೆ. ಇಂತಹ ಚೈತನ್ಯಸ್ವರೂಪರಾದ, ಯುಗಪುರುಷ ಶ್ರೀ ಚಿತ್ತರಗಿ ವಿಜಯಮಹಾಂತ ಶಿವಯೋಗಿಗಳ ಪ್ರಸಾದ ಕಾಯ ನಮ್ಮ ಕಣ್ಮುಂದೆ ಕಾಣದಿದ್ದರೂ, ಅವರ ಅದ್ಭುತ ಪ್ರತಿಭೆ ನಾಡಿನಲ್ಲೆಲ್ಲ ಸೂಕ್ಷ್ಮರೂಪದಲ್ಲಿ ಸಂಚರಿಸುತ್ತಲಿದೆ. ಇಂದಿಗೂ ಆ ಮಹಿಮನ ಹೆಸರಿನಲ್ಲಿ ಶಾಲೆ, ಕಾಲೇಜುಗಳು, ದವಾಖಾನೆಗಳು ತಲೆಯೆತ್ತಿ, ಆ ಶಕ್ತಿಯ ಮಹಿಮೆಯನ್ನು ತೋರಿಸುತ್ತಲಿವೆ.

(ಧಾರವಾಡದ ಬಾನುಲಿ ಕೃಪೆಯಿಂದ)

# ಮಹಾ ಬೆಳಗು "ಶಿವಯೋಗಮಂದಿರ"

[ಪೂಜ್ಯ ಶ್ರೀ ಸಿ. ಪ್ರ. ಮಹಾಂತಸ್ವಾಮಿಗಳು ಇಲಕಲ್ಲ ಮಠಕ್ಕೆ ಅಧಿಕಾರವಾಗುವದಕ್ಕೆ ಮುನ್ನ ಧರ್ಮ ಪ್ರಸಾರಯಾತ್ರೆ ಕೈಕೊಂಡಾಗ ಪತ್ರಿಕೆಗಳಿಗೆ ಬರೆದುಕೊಟ್ಟ ಲೇಖನ:]

ವೀರಶೈವ ಸಮಾಜದ ಗತಕಾಲೀನ ಐತಿಹ್ಯವನ್ನು ನೋಡಿದರೆ, ಅದೊಂದು ಸರ್ವಾಂಗ ಸುಂದರವಾಗಿ ಬೆಳೆದುಕೊಂಡು ಬಂದ ಸಮಾಜವಾಗಿತ್ತು. ಸಾಮಾಜಿಕ, ಧಾರ್ಮಿಕ, ನೈತಿಕ ಮೊದಲಾದ ಎಲ್ಲ ವಿಧದಲ್ಲಿಯೂ ವೀರಶೈವರ ವೈಭವ ಪ್ರಪಂಚವನ್ನೇ ಬೆಳಕುಗೊಳಿಸುತ್ತಿತ್ತು. ವಿಶ್ವಬಾಂಧವ್ಯದ ಪ್ರತೀಕವು ಆಗಿತ್ತು. ಇಂತಹ ಸುಸಂಸ್ಕೃತ ಸುಸಂಬದ್ಧ ಸಮಾಜಕ್ಕೆ ಒಮ್ಮೆ ಅಧೋಗತಿಗಿಳಿಯುವ ಕಾಲವು ಸನ್ನಿಹಿತವಾಯಿತು. ಪುರಾತನರ ಸಾಮೂಹಿಕ ಜೀವನದ ಸ್ಥಿತಿಗತಿಗಳನ್ನರಿಯದೆ, ಸಮಾಜದ ತಾಯಿಬೇರಿನಂತಿರುವ ಗುರುಜಂಗಮರು ಕರ್ತವ್ಯಹೀನರಾದರು. ಸಾಮಾಜಿಕ ಜೀವಿಗಳಾದ ಗುರು ವಿರಕ್ತರು, ಸಮಾಜದ ಸಮ್ಯಕ್ ಸುಖದಲ್ಲಿ, ತಮ್ಮ ಪಾಲಿನ ಸುಖವೂ ಸಮಾವೇಶವಾಗಿರುವದೆಂಬುದನ್ನು ಅರಿಯದೆ, ನ್ಯಾಯಸೀಮಾಮೀರಿದ ವೈಯಕ್ತಿಕ ಸುಖ ಸ್ವಾರ್ಥಗಳಿಗಾಗಿ ಏನೆಲ್ಲ ಪ್ರಯತ್ನದ ಸ್ಪರ್ಧೆಯಲ್ಲಿ ತೊಡಗಿದರು. ಮಾಯಿಕ ವೈಭವದಲ್ಲಿ ಮುಳುಗೇಳುವದೇ ಅವರ ದಿನಚರಿಯಾಯಿತು.

ಧಾರ್ಮಿಕ ನೈತಿಕ ಶಿಕ್ಷಣವು ಇಲ್ಲದಾಯಿತು, ಬೇರೆ ಬೇರೆ ಪ್ರಾಂತದಲ್ಲಿದ್ದ ವೀರಶೈವರು ಅಲ್ಲಲ್ಲಿಯ ವಾತಾವರಣಕ್ಕನುಸರಿಸಿ, ಭಿನ್ನ ಭಿನ್ನ ಆಚಾರ ಉಳ್ಳವರಾದ್ದರಿಂದ ನಿಜವಾದ ವೀರಶೈವ ಆಚರಣೆಯು ತಲೆಕೆಳಗಾಗುವ ಸಮಯ ಬಂದಿತು, ಸಾಂಪ್ರದಾಯ ಶರಣರಾದ ಹಲಕೇವರಲ್ಲಿ ಮಾತುಗಳುಳಿದು ಕೃತಿಯಿಲ್ಲದಾಯಿತು. ಕಟ್ಟುಸಡಿಲಾಗಿ ಸಮಾಜಮಂದಿರವು ನಡುಗಹತ್ತಿತು, ಸಮಾಜವು ಅಧೋಗತಿಯ ಪರಮಾವಧಿಯನ್ನು ಮುಟ್ಟಿತು.

## ಶಿವಯೋಗಮಂದಿರದ ಸ್ಥಾಪನೆಯ ಉದ್ದೇಶ

ಅರ್ಧ ಶತಮಾನದ ಹಿಂದೆ ಹಾನಗಲ್ಲ ಶ್ರೀಗಳವರು ಅಧಃಪತನವಾದ ಸಮಾಜದ ಸರ್ವಾಂಗೀಣ ಉನ್ನತಿಗಾಗಿ ಶ್ರಮಿಸಿದರು. ಅದಕ್ಕಾಗಿ ಭದ್ರವಾದ ತಳಪಾಯವನ್ನು ಹಾಕುವ ಯೋಜನೆಯನ್ನು ಕೈ-ಕೊಂಡರು. ವೀರಶೈವ ಸಮಾಜದ ಮಹಾಜನಗಳನ್ನು ಒಂದುಗೂಡಿಸಿ ಶಿವಯೋಗಮಂದಿರದ ಮೂಲೋದ್ದೇಶಗಳನ್ನು ತಿಳಿಸಿ ಒಡಂಬಡಿ-ಸಿದರು. ವೀರಶೈವ ಸಮಾಜವು ಭಾವಪ್ರಧಾನವಾದ್ದರಿಂದ ಕಲ್ಪನಾ ಸೃಷ್ಟಿಯಲ್ಲಿದ್ದ ಶಿವಯೋಗಮಂದಿರವನ್ನು ಕಾರ್ಯಸೃಷ್ಟಿಗಿಳಿಸುವದು ತಡಹತ್ತಲಿಲ್ಲ.

೧೯೦೯ನೆಯ ಇಸ್ವಿಯ ಆರಂಭಕ್ಕೆ ಶಿವಯೋಗಮಂದಿರದ ಕಾರ್ಯಾರಂಭವು ಆಯಿತು. ಶಿಕ್ಷಕರಿಗೆ ಶಿಕ್ಷಣವನ್ನು ಕೊಡುವ, ಟ್ರೇನಿಂಗ ಕಾಲೇಜುಗಳಂತೆ, ಶಿಷ್ಯರಿಗೆ ಸರಿಯಾದ ಶಿಕ್ಷಣವನ್ನು ಕೊಟ್ಟು, ಯೋಗ್ಯ ಗುರುಜಂಗಮರನ್ನು ತಯಾರಿಸುವ ಹಾಗೂ ಶಿವ ಯೋಗ ವಿದ್ಯೆಯನ್ನು ಪೌರ್ವಾತ್ಯ ರಾಷ್ಟ್ರಗಳನ್ನು ಪ್ರಸಾರಗೊಳಿಸುವ ಮೂಲ ಉದ್ದೇಶಗಳನ್ನು ಶಿವಮಂದಿರವು ಇಟ್ಟುಕೊಂಡಿತು.

ಶ್ರೀಗಳವರು ಶಿವಯೋಗಮಂದಿರವನ್ನು ಸ್ಥಾಪಿಸಿದಾಗ ಒಂದು ಗುಡಿಸಲು, ಐದು ಜನ ಸಾಧಕರು, ಓರ್ವ ಕಾರ್ಯಭಾರಿಗಳು, ಪಂಡಿತ ರೊಬ್ಬರು, ಎರಡು-ಮೂರು ಗೋವುಗಳು ಇಷ್ಟೇ ಪರಿವಾರ ದೊಡನೆ, ಪರಮಪೂಜ್ಯ ಲಿಂ. ಹಾವೇರಿ ಶ್ರೀಗಳವರೊಬ್ಬರೇ ಯಾವತ್ತು ವ್ಯವಸ್ಥೆಯನ್ನು ನೋಡುತ್ತಲಿದ್ದರು. ಶಿವಯೋಗಮಂದಿರದ ಸುತ್ತುವರೆದ ಗ್ರಾಮ-ಪಟ್ಟಣಗಳ ಪ್ರಮುಖರು ಉದಾರಂತಃಕರಣದಿಂದ ಸಹಾಯ-ಸಹಾನುಭೂತಿಗಳನ್ನು ನೀಡುತ್ತಿದ್ದರು. ಅಂದು ಶೈವಾವಸ್ಥೆ ಯಲ್ಲಿದ್ದ, ಶಿವಮಂದಿರವು ಇಂದು ಐವತ್ತು ಅರವತ್ತು ಜನ ಸಾಧಕರುಳ್ಳ ದ್ದಾಗಿಯೂ, ಮುನ್ನೂರು ಗೋವುಗಳುಳ್ಳದ್ದಾಗಿಯೂ, ಐದಾರು ಲಕ್ಷ ರೂಪಾಯಿಗಳ ಆಸ್ತಿಯುಳ್ಳದ್ದಾಗಿಯೂ ಇನ್ನೂ ಅನೇಕ ಮುಖವಾಗಿ ವಿಸ್ತರಣೆಗೊಳ್ಳುತ್ತಲಿದೆ. ಶ್ರೀಗಳವರ ಮಹತ್ವಪೂರ್ಣ ಸಾಧನೆಯನ್ನು ನೆನೆದು ನಾಡಿನ ಪ್ರಖ್ಯಾತ ವಿದ್ವಾಂಸರಲ್ಲಿ ಒಬ್ಬರಾದ, ಕರ್ನಾಟಕದ

ಕುಲಪುರೋಹಿತ ಶ್ರೀ ಆಲೂರು ವೆಂಕಟರಾಯರೆಂದಂತೆ— "ಸಾಮಾನ್ಯ ಜನರಿಗೆ ಅವ್ಯವಹಾರ್ಯವೆಂದು ತೋರಿದ ಕಲ್ಪನೆಗಳಿಗೆ ಮೂರ್ತಿ ಸ್ವರೂಪವನ್ನು ಕೊಡುವ, ಒಂದು ಪ್ರಯತ್ನವು ಶ್ರೀ ಶಿವಯೋಗ ಮಂದಿರ ದಲ್ಲಿ ನಡೆದಿದೆ. ಅವರ ಕಾಯಕವು ಅನೇಕರ ಮನಸ್ಸುಗಳನ್ನೂ ಗೆಲಿಯು ತ್ತಿದ್ದು, ನಡೆಯಿಸಿದ ಪ್ರಯತ್ನವು ಸ್ತುತ್ಯವಾದದ್ದಾಗಿದೆ... ಶಿವಯೋಗ ಮಂದಿರವು ಈ ಪ್ರಕಾರದ (ಪರಧರ್ಮ ಸಹಿಷ್ಣುತೆ ಮೊದಲಾದ) ಅತ್ಯುಚ್ಚ ಕಲ್ಪನೆಗಳ ಮೂರ್ತ ಸ್ವರೂಪವಾಗಲು ಹವಣಿಸುತ್ತಿದೆ. ಅದು ತನ್ನ ಧರ್ಮಕ್ಕನುಸರಿಸಿ ಅತ್ಯುತ್ತಮವಾದ ಸಾತ್ವಿಕ ಜ್ಞಾನಿಗಳನ್ನು ಹುಟ್ಟಿಸುವ ಕಾರಖಾನೆಯು ವೀರಶೈವ ಧರ್ಮವನ್ನುದ್ಧರಿಸುವ ಮಹ ತ್ವಾಕಾಂಕ್ಷೆಯುಳ್ಳ ಸನ್ಯಾಸಿಗಳು ಮುಂದುವರಿಯಬೇಕೆಂದು ಅದರ ಉತ್ಪಾದಕರ ಆಕಾಂಕ್ಷೆ..."

ಅನೇಕ ಉದಾತ್ತ ಧ್ಯೇಯವನ್ನಿಟ್ಟುಕೊಂಡ ಶಿವಯೋಗ ಮಂದಿರವು ತನ್ನ ಬಹುಭಾಗದ ಫಲವನ್ನು ಸಮಾಜಕ್ಕೆ ಕೊಟ್ಟಿದೆ. ಯೋಗದ ಹಾದಿಯೇ ಗೊತ್ತಿಲ್ಲದ ಸಮಾಜದಲ್ಲಿ, ಯೋಗ ಸಾಧನೆಗಳ ಅರಿವಾಯಿತು. ಸ್ವಾರ್ಥತ್ಯಾಗದ ಅರಿವೆ ಇಲ್ಲದ, ಗುರು ಜಂಗಮರ ಗುಂಪಿನಲ್ಲಿ ಕೆಲ- ಮಟ್ಟಿಗಾದರು ಸ್ವಾರ್ಥತ್ಯಾಗಳು ಮೈದೋರಿವವು. ರಕ್ತ ಸಂಬಂಧಿಗಳ ಸಂಪರ್ಕದಿಂದ ಕೆಳಗಿಳಿದ ಮಠ ಪೀಠಗಳು ಇಲ್ಲಿಂದ ತಯಾರಾಗಿ ಹೋದ ಅಧಿಕಾರಿಗಳಿಂದ ಉಧೃತವಾಗಿದೆ. ಮಠಗಳೆಲ್ಲ ಚಾರಿತ್ರ. ನಿಲಯಗಳಾಗಿ ಮಾರ್ಪಟ್ಟಿವೆ. ವ್ಯಾಖ್ಯಾನಕಾರರು, ಕೀರ್ತನಕಾರರು, ಸಂಗೀತಜ್ಞರು. ಸಮಾಜದಲ್ಲಿ ಜಾಗೃತಿಯನ್ನುಂಟು ಮಾಡುತ್ತಲಿದ್ದಾರೆ. ನಾಡವರಂ ಸಹಕಾರ ವೃಷ್ಟಿಯನ್ನಿಟ್ಟುಕೊಂಡು ನೋಡಿದರೆ ಇನ್ನೂ ಅಂದ ಚಂದಗಳನ್ನು ಕಾಣಬಹುದಾಗಿದೆ. ಕಾಲು ಶತಮಾನದ ಹಿಂದೆ ವೀರಶೈವ ಸಮಾಜವು ತನ್ನ ವೈಶಿಷ್ಟ್ಯವನ್ನು ಮರೆತು ಮಬ್ಬಾದಾಗ, ಬೆನ್ನು ತಟ್ಟಿ ಎಬ್ಬಿಸಿ, ಇಂತಹದೊಂದು ಹಿಂದೂ ಸಾಂಸ್ಕೃತಿಕ ಅಖಂಡ ವೈಭವ ದ್ಯೋತಕವಾದ ಸಂಸ್ಥೆಯನ್ನು ಸ್ಥಾಪಿಸಿದ್ದೆಂದರೆ, ಅದು ಚೈತನ್ಯ ಪ್ರದರ್ಶಕವು. ಸಂಸ್ಥಾಪಕರು ಸರ್ವದಾ ವಂದನೀಯರು.

**ಬಹುಮುಖ ವ್ಯಕ್ತಿತ್ವ—**

ಶಿವಯೋಗ ಮಂದಿರದ ಸತ್ಯ ಸಂಕಲ್ಪವನ್ನು ಸುಂದರವಾಗಿ ಕೃತಿ–ಯಲ್ಲಿ ಮೂಡಿಸಿ ಸಮಾಜಕ್ಕೆ ಹಾಗು ನಾಡಿಗೆ ಆಧ್ಯಾತ್ಮಿಕ ಉನ್ನತಿಯನ್ನು ದಯಪಾಲಿಸಿದ ಪರಮ ತಪಸ್ವಿಗಳಾದ ಲಿಂ. ಪರಮಪೂಜ್ಯ ಹಾನಗಲ್ಲ ಕುಮಾರಮಹಾಸ್ವಾಮಿಗಳವರ ದಿವ್ಯ ವ್ಯಕ್ತಿತ್ವವನ್ನು ಸ್ಮರಿಸಿಕೊಂಡಾಗಲೆಲ್ಲ ಭಕ್ತಿಭಾವದಿಂದ ಮೈಸವಿರೇಳುತ್ತದೆ. ಶ್ರೀಗಳವರ ವ್ಯಕ್ತಿತ್ವ ವರ್ಣನೆಗೆ ಲುಕದಂತಹದು. ಸಿಲುಕದಂತಹದು ಅವರು ಪವಿತ್ರಾತ್ಮರು. ಶ್ರೀಗಳವರು ವಿದ್ಯಾದಾಹ, ಪ್ರಯತ್ನಶೀಲ ಪ್ರವೃತ್ತಿ, ಶಿವಾನುಭವದ ಹಸಿವೆ, ದುಗುಡ, ದುಮ್ಮಾನಗಳನ್ನು ಎದುರಿಸುವ ಎದೆಗಾರಿಕೆ. ಜಟಿಲ ಸಮಸ್ಯೆಗಳನ್ನು ನಿಬಿಡಿಸುವ ಸಾಹಸ, ಜನಮನವನ್ನು ಸನ್ಮಾರ್ಗದತ್ತ ಸೆಳೆಯುವ ಶಕ್ತಿ, ವಿಶಾಲ ದೃಷ್ಟಿ, ನಿರಹಂಕಾರಮಾನ್ಯತೆ ತಿಳಿಯಾಸೆ ಇದ್ದಿತು.

ಭಾವ , ವೀರವಿರತಿ ಇವೆಲ್ಲವುಗಳಿಂದ ಅವರ ಜೀವನ ತುಂಬಿ ತುಳುಕುತ್ತಿತ್ತು; ಸಮಾಜಕ್ಕಾಗಿ ತಮ್ಮ ತನು-ಮನಗಳನ್ನೇ ಮೀಸ-ಲಾಗಿರಿಸಿದ ಮಹಾಂತರು. ಅವರಿಗೆ ಲೋಕ ಸಂಗ್ರಹವೇ ಆತ್ಮಸಂಗ್ರಹ ವಾಗಿತ್ತು, ಸಮಾಜೋದ್ಧಾರವೇ ಆತ್ಮೋದ್ಧಾರವಾಗಿತು. ಇಂಥ ಮಹಾಮಹಿಮರ ವ್ಯಕ್ತಿತ್ವದ ಘನತೆ ಲೋಕಕ್ಕೆ ವಿದಿತವಾಗುವದು ಅತ್ಯವಶ್ಯವೆಂದು ಬೇರೆ ಹೇಳಬೇಕಾಗಿಯೇ ಇಲ್ಲ. ಸಮಾಜವು ಸಂಘಟಿತ ವಾಗಿ ಶಕ್ತಿಯುತವಾಗಲೆಂದು ಶ್ರೀಗಳವರು ಅಖಿಲ ಭಾರತೀಯ ವೀರಶೈವ ಮಹಾಸಭೆಯನ್ನು ಸ್ಥಾಪಿಸಿ, ಜನತೆಯಲ್ಲಿ ನವಚೈತನ್ಯವನ್ನು ತುಂಬಿದರು. ಕ್ರಿಯಾಶೀಲರಾದ ಶ್ರೀಗಳವರು ಶಿವಾನುಭಾವ ಪ್ರಸಾರ ಕಾರ್ಯವನ್ನು ನಾಡಿನ ಮೂಲೆ ಮೂಲೆಗಳಲ್ಲಿ ಮಾಡಿ ಶಿವಾನುಭವದ ನಿಜ ವಾದ ತಿರುಳನ್ನು ಜನತೆಗೆ ತಿಳುಹಿಕೊಟ್ಟರು. ಶ್ರೀಗಳವರ ವ್ಯಕ್ತಿತ್ವ ಹೀಗೆ ಘನತರವಾಗಿದೆ. ಅವರ ಸಮಾಜ ಸೇವೆ ಅನುಪಮವಾಗಿದೆ. ಅವರ್ಣನೀಯವಾಗಿದೆ.

**ಸಹಾಯಕೊಟ್ಟ ಸಮ್ರಾಜ್ಞ**

ಈ ಪುಣ್ಯ ಪ್ರಭಾವರು (ಹಾನಗಲ್ಲಶ್ರೀಗಳು) ಶಿವಯೋಗ–

ಮಂದಿರದ ಉತ್ಕರ್ಷವೇ ತಮ್ಮ ಜೀವಿತದ ಇತಿ ಕರ್ತವ್ಯವೆಂದು ಭಾವಿಸಿ, ನಿದ್ದೆ ನೀರಡಿಕೆ ಇಲ್ಲದೆ, ಕನಸು ಮನಸಿನಲ್ಲಿ ಸಹ ಶಿವಯೋಗ ಮಂದಿರವನ್ನು ಧ್ಯಾನಿಸಿ ಅದನ್ನು ಉಚ್ಛ್ರಾಯ ಸ್ಥಿತಿಗೆ ತಂದು ಮುಟ್ಟಿಸಿದ್ದು ಸಮಸ್ತರಿಗೂ ತಿಳಿದ ವಿಷಯವೇ. ಭದ್ರ ಬುನಾದಿಯ ಮೇಲೆ ಕಟ್ಟಿಹೋದ ಶ್ರೀಗಳವರ ಸಂಸ್ಥೆಗೆ ನಾಡಿನ ಸ್ವ-ಪರ ಸಮಾಜದ ಕೊಡುಗೈ ದೊರೆಗಳಿಂದ ಕೊಡುಗೆ ಪ್ರವಾಹರೂಪದಿಂದ ಹರಿದು ಬಂದಿದೆ. ಬರುತ್ತಲಿದೆ. ಈ ಸಂಸ್ಥೆಯಿಂದ ಶಿಕ್ಷಣ ಹೊಂದಿ ಮಠಾಧಿಪತ್ಯವನ್ನು ವಹಿಸಿಕೊಂಡ ಅನೇಕ ಜನ ಶ್ರೀಗಳು ತ್ರಿಕರಣಪೂರ್ವಕ ಸೇವೆಸಲ್ಲಿಸಿದ್ದಾರೆ, ಶಿವಯೋಗ ಮಂದಿರದ ಮಾತೃಸ್ವರೂಪರಾದ ಪರಮ ಪೂಜ್ಯ ಲಿಂ. ಹಾವೇರಿ ಶಿವಬಸವ ಮಹಾಸ್ವಾಮಿಗಳು ಸಂಸ್ಥೆಯ ಆಜೀವ ಅಧ್ಯಕ್ಷರಾಗಿದ್ದರು. ಹುಬ್ಬಳ್ಳಿಯ ಮೂರುಸಾವಿರ ಮಠಾಧ್ಯಕ್ಷರಾದ ಪೂಜ್ಯ ಲಿಂ, ಜಗದ್ಗುರು ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳವರು ತಮ್ಮ ಕಾಲಾವಧಿಯಲ್ಲಿ ಸಂಸ್ಥೆಗೆ ಎರಡು ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿದ್ದು ಸ್ತುತ್ಯಕಾರ್ಯವಾಗಿದೆ. ಬಂದ ಈ ಭೂರಿದಾನಕ್ಕಾಗಿ ಸಂಸ್ಥೆ ಚಿರಋಣಿಯಾಗಿದೆ.

ಶ್ರೀ ಶಿವಯೋಗ ಮಂದಿರದಲ್ಲಿ ಯೌಗಿಕ ಹಾಗು ಧಾರ್ಮಿಕ ಶಿಕ್ಷಣದ ಜೊತೆಗೆ ಕನ್ನಡ, ಸಂಸ್ಕೃತ ಹಾಗು ಇಂಗ್ಲೀಷ್ ಶಿಕ್ಷಣವನ್ನು ನೀಡುವ ಕ್ರಮುವರಿತ ಯೋಜನೆಯೊಂದು ಏರ್ಪಾಟಾಗಿದೆ, ಇಲ್ಲಿಯ ಅದೆಷ್ಟೋ ಸಾಧಕರು ಗುರು-ವಿರಕ್ತರೆಂಬ ಸ್ಥಲ ಮತ್ತು ಸಮಯಗಳ ಭೇದ-ಭಾವನೆಯಿಲ್ಲದೆ, ಸಮಾನತೆ ಹಾಗು ಐಕ್ಯ ಭಾವದಿಂದ ಶಿಕ್ಷಣ ಪಡೆದು ನಾಡಿನ ಸರ್ವತೋಮುಖ ಶ್ರೇಯೋಭಿವೃದ್ಧಿಗೆ ಕಾರಣೀಭೂತರಾಗಿದ್ದಾರೆ. ಈ ಮಂದಿರ ನಾಡಿನ ಆತ್ಮ ಸಂಸ್ಕೃತಿಯ ಜೀವನಾಡಿ. ಶಿವಯೋಗದ ಸಹಜ ಸ್ಫುರಣ ಇದರ ಬಾಳು- ಬೆಳೆ- ಬೆಳಕಿನಲ್ಲಿ ವಿಶ್ವದ ಬೆಳಕು ಅಡಗಿದೆ. ಇದರ ಸ್ವಾಸ್ಥ್ಯದಲ್ಲಿ ಸಮಾಜದ ಸ್ವಾಸ್ಥ್ಯ ನೀಡಿದೆ.

———

## ಪೂಜ್ಯ ಜಗದ್ಗುರುಗಳ ಆಶೀರ್ವಚನದಿಂದ...

"...ಸಂಗೀತ ಕಲಾವಿದರೂ ಸಾಹಿತಿಗಳೂ ಆದ ಶ್ರೀ ಗುರುಸ್ವಾಮಿ ಕಲಕೇರಿಯವರು... ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನಮಠದ ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳು ಅಲ್ಲಲ್ಲಿ ನೀಡಿದ ಭಾಷಣಗಳು ಹಾಗೂ ಲೇಖನಗಳ ಸಾರಸರ್ವಸ್ವವನ್ನು 'ನುಡಿಲಿಂಗದಾರತಿ' ಎಂಬ ಲೇಖನದಲ್ಲಿ ಸ್ವಾರಸ್ಯಮಯವಾಗಿ ಸಂಗ್ರಹಿಸಿದ್ದಾರೆ. ಶ್ರೀ ಸ್ವಾಮಿಗಳವರ ವೈವಿಧ್ಯಪೂರ್ಣ ಹಾಗೂ ವಿಚಾರಪೂರ್ಣ ಅಭಿಪ್ರಾಯಗಳು ಸಾರ್ವತ್ರಿಕ ಸಂದೇಶ (Universal Sayings) ಗಳಾಗಿವೆ. ಲಿಂಗತತ್ತ್ವ, ಆಚಾರ, ಕಾಯಕ, ಪಾವಿತ್ರ್ಯ, ಧರ್ಮಪ್ರಜ್ಞೆ, ವಿಶ್ವಶಾಂತಿಗಳ ಬಗ್ಗೆ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳವರು ಪರಿಣತ ಅಭಿಪ್ರಾಯಗಳನ್ನು ನೀಡಿದ್ದಾರೆ. ಇಂಥ ಉದಾತ್ತ ಅಭಿವ್ಯಕ್ತಿಗಳಿಗೆ 'ನುಡಿಲಿಂಗದಾರತಿ' ಎಂದು ಕರೆದುದು ನಿಜಕ್ಕೂ ಅರ್ಥ-ಪೂರ್ಣ...ಈ ಗ್ರಂಥ ಸಾವಿರಾರು ಭಕ್ತರ, ತತ್ತ್ವಪ್ರೇಮಿಗಳ ಬಯಕೆಯನ್ನು ಈಡೇರಿಸುವಲ್ಲಿ ಸಂಶಯವಿಲ್ಲ..."

Cover Printed at Samyukta Karnatak Press, (Job) Hubli.